# ಹಗೆ

(ಪತ್ತೇದಾರಿ ಕಥೆ)



ಲೇಖಕರು:

ಭಟ್ಟ ಸದಾಶಿವ ಶರ್ಮಾ

ಮುದ್ರಕ-ಪ್ರಕಾಶಕರು

ಬಿ. ಪಿ. ಕಾಳೆ,

ಶ್ರೀ ಶೇಷಾಚಲ ಪ್ರೆಸ್ಸ, ಧಾರವಾಡ



೩ನೇ ಮುದ್ರಣ



೧೯೫೧

ಬೆಲೆ ೧-೪-೦

# ಪ್ರಕಾಶಕರ ಎರಡು ಮಾತುಗಳು



ಶ್ರೀ ಶೇಷಾಚಲ ಗ್ರಂಥಮಾಲೆಯು ಸುಭಾನು ನಾಮ ಸಂವತ್ಸರದ ಪ್ರಥಮ ಪ್ರಕಟನೆಗಾಗಿ ಈ ಪತ್ರಿದಾರಿ ಕಥೆಯನ್ನು ವೇ. ಬ್ರ. ಶ್ರೀ. ಭಟ್ಟ ಸದಾಶಿವ ಶರ್ಮ ಗುಂಡ್ಮಿಯವರು ಬರೆದುಕೊಟ್ಟ ಬಗ್ಗೆ ನಾವು ಅವರಿ ತುಂಬಾ ಋಣಿಯಾಗಿರುವೆವು.

ಪ್ರಸ್ತುತ ಮಹಾಯುದ್ಧದ ಮೂಲಕ ಎಲ್ಲ ಸಾಮಾನುಗಳ ಬೆಲೆಯು ಹೆಚ್ಚಿದೆ. ಅದರಲ್ಲಿ ಬಂಗಾರ, ಬೆಳ್ಳಿ ಮುಂತಾದ ವಸ್ತುತಃ ಬೆಲೆಯುಳ್ಳ ಜಿನಸುಗಳ ಬೆಲೆಯು ಯುದ್ಧಪೂರ್ವಕ್ಕಿಂತ ೩-೪ ಪಟ್ಟು ಹೆಚ್ಚಿದರೆ ಅಕ್ಕಿ, ಜೋಳ, ಬಟ್ಟೆ ಮುಂತಾದ ನಿತ್ಯೋಪಯೋಗೀ ಸಾಮಾನುಗ ಬೆಲೆಯು ೫-೮ ಪಟ್ಟು ಹೆಚ್ಚಿವೆ; ಆದರೆ ಕಾಗದದಂತಹ ತೀರ ಸಾಮಾ ಪದಾರ್ಥದ ಬೆಲೆಯು ಯುದ್ಧಪೂರ್ವಕ್ಕಿಂತ ೧೨-೧೬ ಪಟ್ಟು ಹೆಚ್ಚಿ ಹೋಗಿದೆ! ಸರಕಾರದವರು ಕಾಗದದ ಬೆಲೆಯನ್ನು ನಿಯಂತ್ರ ಗೊಳಿಸಿದ್ದರೂ, ಸಿಗಬಹುದಾದ ಕಾಗದವನ್ನು ಹಂಚಿಕೊಡುವ ಬಗ್ಗೆ ಮಾಡಿದ ವ್ಯವಸ್ಥೆಯು ಸಮಾಧಾನಕರವಾಗಿಲ್ಲ. ಅದರಿಂದ ಮುದ್ರಕ-ಪ್ರಕಾಶಕರ ಮೇಲೆ ಈ ಯುದ್ಧದ ದುಷ್ಪರಿಣಾಮವಾದಷ್ಟು ಇನ್ನಿತರ ರಾರಿಗೂ ಆಗಿಲ್ಲವೆಂದು ನಿರ್ಭಯವಾಗಿ ಹೇಳಬಹುದು.

ಈ ಕಾರಣದಿಂದಲೇ ಈ ಪುಸ್ತಕದ ಬೆಲೆಯನ್ನು ಅನಿವಾರ್ಯ ವಾಗಿ ಹೆಚ್ಚಿಸಬೇಕಾಗಿದೆ. ನಮ್ಮ ಅಕ್ಕರದ ಕನ್ನಡ ವಾಚಕರು ನಮ್ಮ ಇತರ ಪುಸ್ತಕಗಳಿಗೆ ಆಶ್ರಯವಿತ್ತಂತೆ ಇದಕ್ಕೂ ಕೊಡಬೇಕೆಂದು ಬಿನ್ನೈಸುವೆವು.

ಧಾರವಾಡ,
ನವಂಬರ ೧೯೪೩

— ಪ್ರಕಾಶಕ.

# ೧.

## ವಿಪರೀತ ಚಳಿ

........

ಡಿಶಂಬರ ತಿಂಗಳ ಅಂತಿಮ ಭಾಗ. ಇಂಗ್ಲಂಡದಲ್ಲಾದರೂ ಡಿಶಂಬರದ ಚಳಿಯು ಅಸಹ್ಯವಾಗಿಯೇ ಇರುತ್ತದೆ; ಅದರಲ್ಲಿಯೂ ನಾವೀಗ ಎತ್ತಿಕೊಂಡಿರುವ ಕತೆ ನಡೆದ ವರ್ಷ ಇನ್ನೂ ಹೆಚ್ಚು ಮಂಜು ಬಿದ್ದಿತ್ತು. ನಮ್ಮಂತಹ ಉಷ್ಣ ದೇಶದಲ್ಲಿರುವವರು ಆ ಶೀತ ತಾಳಿಕೊಳ್ಳುವುದು ಕಷ್ಟ.

ಈ ಭಯಂಕರ ಚಳಿಯಲ್ಲಿಯೂ ಆ ದೇಶದ ಕೆಲಸ-ಕಾರ್ಯವು ನಿಂತಿರುವುದಿಲ್ಲ. ಉಗಿಬಂಡಿಗಳು ಗಡಿಯಾರದ ಮುಳ್ಳಿನಂತೆ ತಕ್ಕವೇಳೆಗೆ ನಿಯಮಿತ ಸ್ಥಳವನ್ನು ಮುಟ್ಟುತ್ತಿದ್ದುವು. ಅದೊಂದು ದಿನ ಸಂಜೆಯ ವೇಳೆ. ಸ್ಕಾಟಲಂಡಕ್ಕೆ ಹೋಗುವ ಒಂದು ಎಕ್ಸಪ್ರೆಸ್ಸು ಹಲವು ಪ್ರಯಾಣಿಕರನ್ನು ಹೊತ್ತುಕೊಂಡು, ಲಂಡನದ ಸೆಂಟ ಪ್ಯಾಲಗಸ ಸ್ಟೇಶನದಿಂದ ಉತ್ತರಾಭಿಮುಖವಾಗಿ ತೆರಳುತ್ತಿದ್ದಿತು. ಅಂದು ಆಕಾಶವು ಮೋಡದಿಂದ ಕವಿದಿತ್ತು; ಸಂಜೆಯಾಗುತ್ತಲೆ ಗಾಳಿಯೂ ಬಲವಾಗಿ ಬೀಸತೊಡಗಿತ್ತು. ಟ್ರೇನು ಭರದಿಂದ ಸಾಗುತ್ತಿದ್ದಿತು.

ಕ್ರಿಸ್ಸಮಸ್ಸು ಸಮೀಪಿಸಿದ್ದುದರಿಂದ ಈ ಸಂದರ್ಭದಲ್ಲಿ ಭ್ರಮಣಕ್ಕಾಗಿ ಹಲವಾರು ಜನರು ಸ್ಕಾಟಲಂಡಕ್ಕೆ ಹೋಗುತ್ತಿದ್ದರು. ಆದುದರಿಂದಲೇ ಟ್ರೇನಿಗೆ ಅನೇಕ ಬಂಡಿಗಳು ಜೋಡಿಸಲ್ಪಟ್ಟಿದ್ದುವು. ಇಂತಹ ನೀಳವಾದ ಟ್ರೇನು ಬಹುಶಃ ನೋಡಲು ಸಿಗುವುದಿಲ್ಲ.

ಈ ಟ್ರೇನಿನಲ್ಲಿ ಇಂಗ್ಲಂಡದ ಪ್ರಸಿದ್ಧ ಪುರುಷನೊಬ್ಬನು ತನ್ನ ಜತೆಗಾರನೊಂದಿಗೆ ಕುಳಿತಿದ್ದನು. ಬ್ಲೇಕನೆಂದು ಅವನ ಹೆಸರು; ಮತ್ತವನ ಸಂಗಡಿಗನ ಹೆಸರು ಸ್ಮಿತ್ತನೆಂದು. ಬ್ಲೇಕನು ಆ ಕಾಲದಲ್ಲಿ ಲಂಡನ್ನಿನ ಪೋಲೀಸರಲ್ಲಿ ಸರ್ವಪ್ರಧಾನ ಬೇಹುಗಾರನಾಗಿದ್ದನು. ಸಮಸ್ತ ಯುರೋಪದಲ್ಲಿ ಅವನ ಖ್ಯಾತಿಯು ಪಸರಿಸಿದ್ದಿತು. ಸ್ಮಿತ್ತನು ಅತನ ಶಿಷ್ಯ; ಈತನ ವಯಸ್ಸು ಹದಿನೇಳು-ಹದಿನೆಂಟು ವರ್ಷವಿರಬಹುದು. ಆ ದಿನ ಒಂದಾನೊಂದು ವ್ಯವಹಾರವನ್ನು ಬಗೆಹರಿಸಲೋಸುಗ ಬ್ಲೇಕನು ಸ್ಕಾಟಲ್ಯಾಂಡಕ್ಕೆ ಹೋಗುತ್ತಿದ್ದನು. ಅವನಿಗೆ ಗ್ಲಾಸಗೋ ನಗರದಲ್ಲಿ ಕೆಲಸ

ವಿದ್ದಿತು. ಕ್ರಿಸ್ಮಸ್ಸದ ರಜೆಯಲ್ಲಿ ಬೇಟೆಯಾಡಲು ಸ್ಕಾಟಲಂಡಕ್ಕೆ ಹೋಗುತ್ತಿರುವನೆಂದು ಅವನ ಜತೆಯಲ್ಲಿದ್ದವರು ತಿಳಿದಿದ್ದರು. ಅವನ ಯಾತ್ರೆಯ ನಿಜವಾದ ಸಂಗತಿಯು ಯಾರಿಗೂ ಗೊತ್ತಿರಲಿಲ್ಲ. ಬ್ಲೇಕನು ಫಸ್ಟ್‌ಕ್ಲಾಸಿನಲ್ಲಿ ಕುಳಿತಿದ್ದನು; ಆದರೆ ಈ ಭಯಂಕರವಾದ ಇರುಳಿನಲ್ಲಿ ಅವನಿಗೆ ನಿದ್ದೆ ಹತ್ತಲಿಲ್ಲ. ಹೀಗಾಗಿ ಸ್ಮಿತ್ತನೊಂದಿಗೆ ಮಾತಾಡಲು ಮೊದಲಿಟ್ಟನು.

ಹತ್ತು ತಾಸು ರಾತ್ರಿಯ ಮೇಲೆ ಭೀಕರತೆಯು ಮತ್ತೂ ಹೆಚ್ಚಿತು. ಹತ್ತಿಯ ರಾಶಿಯಂತೆ ಹಿಮವು ಪಾಳ್ಬಿತೆಗಳಲ್ಲಿಯೂ ಆವರಿಸಿತು.

ಸ್ಮಿತ್ತನೊಂದು ಸಲ ಕಿಟಕಿಯಿಂದ ಹೊರಗೆ ತಲೆಹಾಕಿ ನೋಡಿದನು. ಹಿಮದಿಂದ ತೊಯ್ದ ತಂಗಾಳಿಯು ಸೋಂಕಿತು. ಒಡನೆ ತಲೆಯನ್ನು ಒಳಕ್ಕೆಳೆದುಕೊಂಡು, ಕಿಟಕಿಯನ್ನು ಮುಚ್ಚಿ, ಬ್ಲೇಕನನ್ನು ಕುರಿತು:—ಎಂತಹ ಭೀಕರ ಮಂಜು ಬೀಳುತ್ತಿದೆ? ನಗರದಲ್ಲಿಷ್ಟು ಬೀಳುತ್ತಿಲ್ಲ. ನಾನಾದರೋ ಇಂದು ಪ್ರಯಾಣ ಮಾಡುವುದುಚಿತವಲ್ಲವೆಂದು ಮೊದಲೇ ಹೇಳಿದ್ದೆನು.

ಬ್ಲೇಕ—ಇಂದು ಭಯಂಕರ ಸಂಕಟವನ್ನಿದಿರಿಸಬೇಕಾಗುವದು. ಒಮ್ಮೆ ನಾನು ಯೋಚಿಸಿದ್ದೆ, ಇಂದು ಮನೆಯಿಂದ ಹೊರಡುವದು ಯುಕ್ತವಲ್ಲವೆಂದು; ಆದರೆ ಕೆಲಸವೇ ಅಂತಹದೊದಗಿತು. ಆಗಲಿ. ಈಗ ಇದನ್ನೆಲ್ಲ ಯೋಚಿಸುವದರಿಂದ ಲಾಭವಾದರೂ ಏನು?

ಸ್ಮಿತ್ತ—ಇದಕ್ಕಾಗಿ ನಾನು ಚಿಂತಿಸುತ್ತಿಲ್ಲ. ಹವೆಯು ನಮಗೆ ನಷ್ಟವನ್ನಾದರೂ ಏನು ಮಾಡೀತು? ಭಯವಿಷ್ಟೆ, ಬಂಡಿ ಎಲ್ಲಿಯಾದರೂ ಹಿಮಗಡ್ಡೆಯುಡಿ ಮುಳುಗಿ ಹೋದೀತೋ! ಎಂದು.

ಬ್ಲೇಕನು ನಗುತ್ತ— ಅದರ ಅಂಜಿಕೆಯಿಲ್ಲ ಬಿಡು. ಎಷ್ಟೇ ಮಂಜು ಬಿದ್ದರೂ, ಬಂಡಿಯೇನೋ ಗ್ಲಾಸಗೋವನ್ನು ತಲುಪಿಯೇ ತಲುಪುವುದು. ಬಂಡಿಯು ವಿಲಂಬವಾಗಿ ತಲಪುವ ಸಂಭವವೂ ಕಾಣಿಸುತ್ತಿಲ್ಲ. ಬಲವಾದ ಎರಡು ಎಂಜಿನುಗಳು ಬಂಡಿಗೆ ಸಂಧಿಸಿರುವುದು ಕಾಣಿಸುವುದಿಲ್ಲವೆ?

ಸ್ಮಿತ್ತ—ಹೌದು. ಬಂಡಿಯು ಅತಿವೇಗದಿಂದ ಓಡುತ್ತಿದೆ. ಪ್ರಾಯಶಃ ಇದರ ವೇಗವು ಎಷ್ಟಾಗಬಹುದು?

ಬ್ಲೇಕ— ಪ್ರತಿ ತಾಸಿಗೆ ೬೦ ಮೈಲು.

ಸ್ಮಿತ್ತ—ನಾನೂ ಹಾಗೆಯೇ ಅನುಮಾನಿಸುತ್ತೇನೆ. ಬಂಡಿಯಲ್ಲಿ ಕುಳಿತಿರುವ ಪ್ರಯಾಣಿಕರಿಗೆ ರೇಲ್ವೆ ಕಂಪನಿಯ ಮೇಲೆ ಅದೆಷ್ಟೋ ವಿಶ್ವಾಸವಿದೆ. ಕಬ್ಬಿಣದ ನಾಲ್ಕಂಗುಲ ಅಗಲದ ಎರಡು ಹಳಿಗಳ ಮೇಲೆ ಈ ಗಾಡಿಯು ಇಷ್ಟು ವೇಗದಿಂದ ಓಡುತ್ತಿದೆ. ಒಂದು ವೇಳೆ ಸಿಗ್ನಲ್ಲರ ನಿಂದ ಸ್ವಲ್ಪವಾದರೂ ಹೆಚ್ಚುಕಡಿಮೆಯಾಯಿತೆಂದರೆ, ಸರ್ವನಾಶವಾಗು ವದರಲ್ಲಿ ಲೇಶವೂ ಸಂಶಯವಿಲ್ಲ.

ಬ್ಲೇಕ—ಆದರೆ ಸಿಗ್ನಲ್ಲರನಿಂದ ಇಂತಹ ದೋಷವಾಗುವುದು ಬಹಳ ಕಡಿಮೆ.

ಸ್ಮಿತ್ತ—ಒಂದಲ್ಲ ಒಂದು ಸಲವಾದರೂ ಆಗುತ್ತದಲ್ಲವೆ?

ಬ್ಲೇಕ—ಹೂಂ, ಆದಾಗುತ್ತದೆ. ನನ್ನ ಸ್ಮರಣೆಯಲ್ಲಿ ಸಿಗ್ನಲ್ಲರನ ಇಂತಹ ತಪ್ಪು ಮೂರು-ನಾಲ್ಕು ಸಾರೆಯಾಗಿದೆ; ಆದರೆ ಇಷ್ಟು ದೊಡ್ಡ ಜವಾಬ್ದಾರಿಯಿದ್ದರೂ ಕೂಡ ಸದಾ ತಪ್ಪಾಗುವದಿಲ್ಲ.

ಮಾತನ್ನು ಪೂರಯಿಸಿ ಬ್ಲೇಕನು ಎದ್ದುನಿಂತನು. ಎದ್ದುದೇಕೆ? ಎಂದು ಸ್ಮಿತ್ತನು ಪ್ರಶ್ನಿಸಿದನು.

ಬ್ಲೇಕ—ಒಮ್ಮೆ ಇತರ ಬಂಡಿಗಳಲ್ಲಿ ತಿರುಗಿ ಬರೋಣ, ಕುಳಿತು ಕುಳಿತು ಕಾಲು ಬತ್ತಿಹೋಯಿತು.

ಈ ಟ್ರೇನಿನಲ್ಲಿ ಒಳಗಿಂದೊಳಗೇ ಎಲ್ಲ ಬಂಡಿಗಳೊಳಗೆ ತಿರುಗಾಡಲು ಅನುಕೂಲವಿದ್ದಿತು.

ಬ್ಲೇಕನು ಬಂಡಿಗಳಲ್ಲಿ ಸುತ್ತಹತ್ತಿದನು. ಊಟಮಾಡುವ ಕೋಣೆ ಯಲ್ಲಿ ಆಗಲೂ ಹಲವರು ಮೇಜಿನ ಮುಂದೆ ಕುಳಿತು ಮಾತಾಡುತ್ತಿದ್ದರು. ಹೊರಗಣ ಭಯಂಕರತೆಯ ಕಡೆಗೆ ಅವರಿಗೆ ಕಿಂಚಿತ್ತೂ ಧ್ಯಾನವಿರಲಿಲ್ಲ. ಮಲಗುವ ಕೋಣೆಯನ್ನು ಪ್ರವೇಶಿಸಿದಾಗ ದೀಪದ ಪ್ರಕಾಶವು ತೀರ ಮಂದವಾಗಿದ್ದಿತು. ಅನೇಕ ಪ್ರಯಾಣಿಕರು ಅದರಲ್ಲಿ ನಿದ್ರಿಸಿದ್ದರು. ಒಬ್ಬೊ ಬ್ಬರ ಮೂಗಿನ ದನಿಯಿಂದ ಆ ಬಂಡಿಯು ಪ್ರತಿಧ್ವನಿಸುತ್ತಿದ್ದಿತು.

ಆದರೆ ಮೂರನೇ ದರ್ಜೆಯ ಪಯಣಿಗರ ಅವಸ್ಥೆ ತೀರ ವಿಪರೀತ ವಾಗಿದ್ದಿತು. ಸ್ಥಾನಾಭಾವದ ದೆಸೆಯಿಂದ ಜನರು ಒಬ್ಬರ ಮೇಲೊಬ್ಬರು ಹೇರಿಕೊಂಡು ಕುಳಿತಿದ್ದರು. ಯಾರಿಗೂ ಕದಲಲಾಗುತ್ತಿರಲಿಲ್ಲ. ವಿದ್ಯುತ್ ಪ್ರಕಾಶದಲ್ಲಿ ಕೆಲ ಜನರು ವೃತ್ತಪತ್ರಗಳನ್ನೋದುತ್ತ ಸಮಯ ಕಳೆಯು

ಜ್ವರವು ಬಹಳ ಏರಿದೆ. ಅಂಗಾಂಗಗಳಲ್ಲಿ ಭಯಂಕರ ಪೀಡೆಯಾಗುತ್ತಿದೆ. ನನ್ನ ಡ್ಯೂಟಿಗೆ ತಲಪುವುದು ಹೇಗೆಂದೋ ಯೋಚಿಸುತ್ತಿದ್ದೇನೆ.

ಲೂಸಿ—ಈಚೆಗೆ ಬಹಳ ಜನರಿಗೆ ಇನ್‌ಫ್ಲುಯೆಂಜಾ ಜ್ವರ ಬರುತ್ತಿದೆ. ನಿಮಗೂ ಅದೇ ಜ್ವರವೆಂದು ತೋರುತ್ತಿದೆ.

ಪಾರ್ಮಿಂಟರ—ಹೂಂ, ನನಗೂ ಹಾಗೆಯೇ ಕಾಣುತ್ತದೆ.

ಲೂಸಿ—ಈ ದಿನ ನೀವು ಕೆಲಸದ ಮೇಲೆ ಹೋಗುವುದೇ ಬೇಡ. ಇಂತಹ ಜ್ವರ ಬಂದಾಗ ಯಾರಾದರೂ ಕೆಲಸಕ್ಕೆ ಹೋಗುವರೆ?

ಪಾರ್ಮಿಂಟರನು ಕಾತರಭಾವದಿಂದ—ಆದರೆ ಉಪಾಯವೇನಿದೆ?

ಲೂಸಿ—ಏನೇ ಆಗಲಿ, ಇಂಥ ಅಪಾಯದ ಸಮಯದಲ್ಲಿ ನಿಮ್ಮನ್ನು ನಾನು ಮನೆಯಿಂದ ಹೊರ ಹೋಗಲು ಬಿಡುವುದಿಲ್ಲ. ವಿಲಿಯಮ್ಮನು ಇಂದು ರಾತ್ರಿ ನಿಮ್ಮ ಕೆಲಸ ನೋಡಿಕೊಳ್ಳುವನು. ನೀವು ಹೋಗದಿರುವುದರಿಂದಲೇ ಏನೋ ಕಷ್ಟ ಬಂದಿರಬೇಕೆಂದವನು ತಿಳಿದುಕೊಳ್ಳುವನು.

ಪಾರ್ಮಿಂಟರ— ಹಾಗೆ ಮಾಡುವುದೆಂದರೆ, ಆ ಬಡಪಾಯಿಗೆ ಗೋಳು ಕೊಡುವುದೇ ಸರಿ. ಅವನ ಕಿರಿ ಮಗಳಿಗೆ ಬಹಳ ಕಾಹಿಲೆಯಂತೆ.

ಲೂಸಿ— ಆ ಹುಡುಗಿಗೆ ಕಾಹಿಲೆಯೇ? ಹಾಗಾದರೆ ಅವನನ್ನು ತಡೆಯುವುದುಚಿತವಲ್ಲ; ಆದರೆ ನಿಮ್ಮನ್ನಾದರೂ ಹೇಗೆ ಹೋಗಗೊಡಲಿ? ಇಂದಿನ ರಾತ್ರಿಯ ಮಟ್ಟಿಗೆ ನಿಮ್ಮ ಕೆಲಸ ಮಾಡಿ ಕೊಡಲು ಯಾರೂ ಸಿಗಲಾರರೇ?

ಪಾರ್ಮಿಂಟರನು ಉಸಿರ್ಗರೆದು—ಯಾರೂ ಸಿಗರು. ನಾನಲ್ಲಿಗೆ ಹೋದ ಮೇಲೆಯೇ ವಿಲಿಯಮ್ಮನ ಬಿಡುಗಡೆಯಾಗುವದು. ನಾನು ಮುಟ್ಟಲು ಹೊತ್ತಾದುದನ್ನು ಕಂಡರೆ ಅವನು ಚಡಪಡಿಸಬಹುದು. ಆ ಹುಡುಗಿಯನ್ನಾತನು ಬಹಳವಾಗಿ ಪ್ರೀತಿಸುತ್ತಾನೆ.

ಲೂಸಿಯು ಕಾತರ ದೃಷ್ಟಿಯಿಂದ ಸ್ವಾಮಿಯ ಮುಖವನ್ನು ನೋಡಿ:- ಅಯ್ಯೋ! ನಾನೊಂದು ವೇಳೆ ನಿಮ್ಮ ಕೆಲಸ ಮಾಡಬಲ್ಲನಾಗಿದ್ದರೆ ತುಂಬಾ ಶಾಂತಿಯೆನಿಸುತ್ತಿದ್ದಿತು. ಹುಡುಗನೊಬ್ಬನನ್ನೇ ಬಿಟ್ಟು ನನಗೆ ನಿಮ್ಮೊಡನೆ ಬರಲೂ ಮಾರ್ಗವಿಲ್ಲ.

ಪಾರ್ಮಿಂಟೆರ—ಅದು ಅಗತ್ಯವಿಲ್ಲ. ನೀನೀ ಭಯಂಕರ ರಾತ್ರಿಯಲ್ಲಿ ಒಬ್ಬಳೇ ಇಲ್ಲಿ ಹೇಗಿರಬಲ್ಲೆ? ಎಂದು ಯೋಚಿಸಿ ನಾನು ವ್ಯಾಕುಲಿತನಾಗಿರುವೆನು.

ಲೂಸಿ—ನನಗಾಗಿ ನೀವು ಸ್ವಲ್ಪವೂ ಚಿಂತಿಸಬಾರದು; ಆದರೆ ಇಂಥ ಅಸ್ವಸ್ಥತೆಯಲ್ಲಿ ನೀವು ಕೆಲಸವನ್ನೆಂತು ಮಾಡುವಿರಿ? ಸ್ಟೇಶನ್ನಿನಲ್ಲಿ ಫೋನ ಮಾಡಿದರೆ ಹಾನಿಯೇನು? ಯಾರಾದರೂ ಬಂದರೆಂದಾದರೆ, ನೀವು ಇಡೀ ರಾತ್ರಿ ವಿಶ್ರಮಿಸಿಕೊಳ್ಳಬಹುದು.

ಪಾರ್ಮಿಂಟೆರನು ಅನನ್ಯಭಾವದಿಂದ ಹೇಳಿದ—ಅದಕ್ಕಾಗಿ ಯತ್ನಿಸುವೆನು. ಯಾರಾದರು ಬಂದರೆ ನಾನು ರಾತ್ರಿಯೇ ಹಿಂದಿರುಗಿ ಮನೆಗೆ ಬಂದು ಬಿಡುವೆನು. ಇರಲಿ. ಹನ್ನೆರಡು ಬಡಿಯಿತು. ನೀನು ಹೋಗಿ ಮಲಗಿಕೋ ನಾನಿನ್ನು ನಿಂತಿರಲಾರೆ. ನೀನು ನನ್ನ ಯೋಚನೆ ಕಟ್ಟಿಕೊಳ್ಳಬೇಡ.

ಪಾರ್ಮಿಂಟೆರನು ನಡೆದು ಬಿಟ್ಟನು ನಡುಗುತ್ತಿರುವ ಕಾಲುಗಳಿಂದ ನಿಧಾನವಾಗಿ ದಾರಿ ಸಾಗಿಸಹತ್ತಿದನು.

— —

## ಟ್ರೇನು ಮಗುಚಿತು

ಸ್ವಲ್ಪ ದೂರ ನಡೆದ ಮೇಲೆ ಪಾರ್ಮಿಂಟೆರನು ಈ ಅಸ್ವಸ್ಥತೆಯಲ್ಲಿ ಹೊರ ಹೊರಟುದುದು ಚೆನ್ನಾಗಲಿಲ್ಲವೆಂದು ಯೋಚಿಸಿದನು. ಅರ್ಧ ಮೈಲು ನಡೆಯುವದರೊಳಗೇ ಅವನ ಶರೀರವು ಸ್ತಬ್ಧವಾಯಿತು. ಈಗ ಅತನಿಗೆ ನಿಶ್ಚಿತ ಸ್ಥಳಕ್ಕೆ ತಲಪುವೆನೆಂಬ ಆಶೆಯು ಕೊಂಚವೂ ಉಳಿಯಲಿಲ್ಲ. ನಡೆಯುತ್ತಿದ್ದಂತೆಯೇ ದೊಣ್ಣೆಯೂರಿ ನಿಂತುಬಿಟ್ಟನು. ನಿಟ್ಟುಸಿರು ಬಿಟ್ಟು ತನ್ನೊಳಗೇ ನುಡಿದ:—ಇಂದು ರಾತ್ರಿ ಈ ಗುಡ್ಡದ ಅಂಚಿನಲ್ಲಿ ಸಾಯಬೇಕಾಗಿದೆ. ಹಾ! ಹುಡುಗನು ನಿದ್ದೆಯಿಂದೆದ್ದ ಬಳಿಕ ತಿರುಗಿ ನನ್ನನ್ನಿನ್ನು ಕಾಣಲಾರನು. ಓ, ಪರಮಾತ್ಮಾ! ನೀನು ದರಿದ್ರರನ್ನು ಸೃಷ್ಟಿಸಿ ಪ್ರಪಂಚಕ್ಕೆ ಕಳುಹಿಸುವಾಗ, ಅವರಿಗೆ ಹೃದಯವನ್ನೇಕೆ ಕೊಡುತ್ತೀ? ಅವರ ಹೃದಯದಲ್ಲಿ ಸ್ನೇಹ-ಮಮತೆಗಳನ್ನೇಕೆ ಇಡುತ್ತೀ?

ಪ್ರಚಂಡ ಗಾಳಿಯು 'ಹೋ-ಹೋ' ಎಂದು ನಗತೊಡಗಿತು.

ಪಾರ್ಮಿಂಟರನು ಹಲವು ಸಲ ಹಾದಿ ತಪ್ಪಿದನು. ಅವನಲ್ಲಿ ನಡೆಯುವ ಶಕ್ತಿಯಿದ್ದಿಲ್ಲ. ಆದರೂ ದೊಣ್ಣೆಯ ಆಧಾರದಿಂದ ಬಲಾತ್ಕಾರವಾಗಿ ನಡೆಯುತ್ತಲೇ ಇದ್ದ. ಅವನ ಬಟ್ಟೆಯ ಮೇಲೆ ಮಂಜು ಕುಳಿತಿತು. ಶೀತದಿಂದ ಇಡೀ ಮೈಯು ನಿರ್ಜೀವವಾದಂತಾಯಿತು. ಅವನಿಗೆ ತನ್ನ ದೇಹದ ರಕ್ತವು ಹಿಮದಷ್ಟು ತಣ್ಣಗಾಯಿತೆಂಬಂತೆ ತೋರಿತು. ಆತ ಕಾತರ ಸ್ವರದಿಂದ ನುಡಿದ:—ದೇವಾ! ಇಂದು ನನಗೆ ಕೆಲಸಮಾಡಲು ಬಲಕೊಡು; ಇಂದು ನಾನು ನನ್ನ ಡ್ಯೂಟಿಗೆ ತಲುಪದೆ ಹೋದಲ್ಲಿ ಪ್ಯಾಸೆಂಜರ ಟ್ರೇನು ಉಳಿಯಲಾರದು. ನೂರಾರು ಯಾತ್ರಿಕರು ಟ್ರೇನನಲ್ಲಿ ಮಡಿದು ಹೋಗುವರು. ಅಹಾ! ಎಂತಹ ಭಯಂಕರ ಪ್ರಸಂಗವು ಉಪಸ್ಥಿತವಾಗುವುದಲ್ಲ! ಹೀಗೆ ಯೋಚಿಸಿ ಪಾರ್ಮಿಂಟರನು ನಡುಗಿಬಿಟ್ಟನು.

ಮನೋಬಲವೇ ಇದೀಗ ಸರ್ವ ಪ್ರಧಾನವಾದ ಬಲ. ಪಾರ್ಮಿಂಟರನ ಮನೋಬಲವು ತುಸು ಮಾತ್ರವೂ ಕುಂದಲಿಲ್ಲ. ಅಂತೆಯೇ ಆತನು ಹೇಗೋ ತನ್ನ ಗಂತವ್ಯ ಸ್ಥಳವನ್ನು ಸೇರಲು ಸಮರ್ಥನಾದನು. ನಡುಗುತ್ತ ಕೋಣೆಯೊಳಗೆ ಹೊಕ್ಕು ಒಂದು ಕುರ್ಚಿಯ ಮೇಲೆ ಕುಳಿತನು. ಅವನ ಸಹಕಾರಿಯಾದ ವಿಲಿಯಮ್ಸನು ಆತನನ್ನೇ ಪ್ರತೀಕ್ಷಿಸುತ್ತ ಕುಳಿತಿದ್ದನು. ಮಗಳಿಗೆ ಬೇನೆಯಾದುದರಿಂದ ಆತನು ಮನೆಗೆ ಹೋಗಲು ತವಕಿಸುತ್ತಿದ್ದನು. ಪಾರ್ಮಿಂಟರನನ್ನು ನೋಡಿ, ವಿಲಿಯಮ್ಸನು ತುಂಬಾ ಆನಂದಿತನಾಗಿ ನುಡಿದನು:— ಪಾರ್ಮಿಂಟರಾ! ತಕ್ಕ ವೇಳೆಗೆ ಬಂದುಬಿಟ್ಟಿ; ಆದರಿಂದ ನನಗೆ ಬಹಳ ಸಂತೋಷವಾಯಿತು. ಈ ಭಯಂಕರ ಚಳಿಯಲ್ಲಿ ನೀನಿಂದು ಇಲ್ಲಿಗೆ ಬರಲಾರೆಯೆಂದೇ ನಾನೆಣಿಸಿದ್ದೆ. ನೀನು ಬಾರದೆ ಇರುತ್ತಿದ್ದರೆ, ಇಡೀ ರಾತ್ರಿ ನಾನಿಲ್ಲಿ ಇರಬೇಕಾಗುತ್ತಿದ್ದಿತು. ನಾನೀ ಕೆಲಸ ಯಾರಿಗೆ ಒಪ್ಪಿಸಿ ಹೋಗುವುದು? ಹುಡುಗಿಗೆ ಕಠಿಣ ಕಾಹಿಲೆ. ಒಳ್ಳೇದು, ನಾನೀಗ ಹೋಗಿ ಬರುವೆನು. ವಿಲಿಯಮ್ಸನು ಹೀಗೆಂದು ಬೇರೆ ಏನೂ ಹೇಳದೆ, ತನ್ನ ಮನೆಯತ್ತ ನಡೆದನು.

ಅವನು ಪಾರ್ಮಿಂಟರನ ಮುಖವನ್ನೊಮ್ಮೆ ನೋಡಿದ್ದ ಪಕ್ಷದಲ್ಲಿ ಅವನ ದೇಹಸ್ಥಿತಿ ನೆಟ್ಟಗಿಲ್ಲವೆಂದು ಆತನಿಗೆ ತಟ್ಟನೆ ತಿಳಿದು ಹೊಗುತಲಿದ್ದಿತು; ಆದರೆ ಆ ಕಡೆ ಅವನ ಧ್ಯಾನವೇ ಇದ್ದಿಲ್ಲ.

ವಿಲಿಯಮ್ಮನು ತೆರಳಿದ ಮೇಲೆ ಪಾರ್ಮಿಂಟರ ಯೋಚಿಸಿದ:— ಅವನನ್ನು ನಾನೇಕೆ ಹೋಗಗೊಟ್ಟೆನು? ನನ್ನ ಯಾತನೆಯ ಸಂಗತಿ ಕೇಳಿದ್ದರೆ ಅವನು ಎಷ್ಟಕ್ಕೂ ಹೋಗುತ್ತಿರಲಿಲ್ಲ. ನನ್ನೀ ತಪ್ಪಿನಿಂದ ಅದಾವ ಭಯಂಕರ ಪ್ರಸಂಗವೊದಗುವುದೋ ತಿಳಿಯದು. ನನ್ನ ವೇದನೆ ಕ್ರಮಶಃ ಬೆಳೆಯುತ್ತಲೇ ಇದೆ. ವಿಲಿಯಮ್ಮನನ್ನು ಕರೆಯಲೇ ಬೇಕು. ಇನ್ನೂ ಬಹಳ ದೂರ ಹೋಗಿರಲಿಕ್ಕಿಲ್ಲ; ನನ್ನ ಸ್ವರ ಕೇಳಿದರೆ, ಹಿಂದಿರುಗಿ ಬಂದೇ ಬರುವನು.

ಬಾಗಿಲ ಬಳಿಗೆ ಹೋಗಿ ಹೆಸರುಗೊಂಡು ಕರೆದನು; ಆದರೆ ಬಲವಾಗಿ ಗಾಳಿ ಬೀಸಿದುದರಿಂದ ಅವನ ಧ್ವನಿಯು ವಿಲಿಯಮ್ಮನ ಕಿವಿಗೆ ಬೀಳಲಿಲ್ಲ.

ಪಾರ್ಮಿಂಟರನು ಹತಾಶನಾಗಿ ಬಂದು, ಕುರ್ಚಿಯ ಮೇಲೆ ಕುಳಿತು ಚಿಂತಿಸಹತ್ತಿದನು. ಹೆಂಡತಿಯೆಂದ ಮಾತು ನೆನಪಾಯಿತು. ಒಡನೆ ಆತನು ಸ್ಟೇಶನ ಮಾಸ್ತರನಿಗೆ ಶರಣು ಹೊಕ್ಕನು.

ಆ ಸ್ಟೇಶನದ ಹೆಸರು ಕಾರ್ನಮೂರ. ಅದು ವೆಸ್ಟಡೆಲ್ಲ ಜಂಕ್ಷನಿನಿಂದ ಎರಡು ಮೈಲು ಉತ್ತರಕ್ಕಿದ್ದಿತು ಪಾರ್ಮಿಂಟರನು ಒಂದು ಗ್ಲಾಸು ತುಂಬ ನೀರು ಕುಡಿದು ಕರವಸ್ತ್ರದಿಂದ ಮೋರೆ ಒರೆಸಿಕೊಂಡನು. ಬಳಿಕ ಕಾರ್ನಮೂರ ಸ್ಟೇಶನ ಮಾಸ್ತರರನ್ನು ಕುರಿತು ಟೆಲಿಫೋನಿನಲ್ಲಿ ಹೇಳಿದ:— ನನಗೆ ಇನಫ್ಲುಯೆಂಜಾ ಜ್ವರ ಒಂದಿದೆ. ನಿಂತುಕೊಳ್ಳಲಿಕ್ಕೂ ಶಕ್ತಿಯಿಲ್ಲ. ದಯಮಾಡಿ ಇಂದು ರಾತ್ರಿ ಕೆಲಸ ಮಾಡಲು ಜನ ಕಳುಹಿಸಿರಿ.

ಎರಡು ಮಿನೀಟು ಕಳೆದು ಕಾರ್ನಮೂರ ಸ್ಟೇಶನ ಮಾಸ್ತರರಿಂದ ಉತ್ತರ ಬಂದಿತು:— ಹಾಬ್ಸನನ್ನು ಕಳುಹಿಸಿದ್ದೇನೆ; ಅರೆ ತಾಸಿನಲ್ಲಿ ಅವನು ನಿನ್ನ ಬಳಿಗೆ ಬಂದು ಮುಟ್ಟುವನು.

ಪಾರ್ಮಿಂಟರನಿಗೆ ನೆಮ್ಮದಿಯಾಯಿತು. ತನ್ನೊಳಗೆ ನುಡಿದ:— ಅರ್ಧಗಂಟೆಯ ಮಾತು. ಅಪ್ಪರ ವರೆಗೆ ನಾನು ಹೇಗಾದರೂ ಕೆಲಸ ನೋಡಿಕೊಳ್ಳುವೆನು

ತಂತಿಯ ಗಂಟೆ ಬಾರಿಸಿತು. ಪಾರ್ಮಿಂಟರ ಒಡನೆ ಎದ್ದು ಕೆಲಸಕ್ಕೆ ತೊಡಗಿದ; ಜ್ವರ-ತಲೆನೋವುಗಳನ್ನು ಮರೆತು ಬಿಟ್ಟ. ಕೈಯು ಯಂತ್ರದಂತೆ ಸುತ್ತಲೂ ತಿರುಗತೊಡಗಿತು. ಕ್ರಮಶಃ ಎರಡು ಮಾಲು ಗಾಡಿಗಳೂ ಒಂದು ಸವಾರಿ ಗಾಡಿಯೂ ವೆಸ್ಟಡೆಲ್ಲ ಜಂಕ್ಷನ್ನವನ್ನು ದಾಟಿ ಹೋದುವು.

ಆಗ ಪಾರ್ಮಿಂಟರನಿಗೆ ಹೆಚ್ಚಾಗಿ ಜ್ವರ ಬಂದಿದ್ದಿತು. ಜ್ವರದ ಉತ್ತೇಜನೆಯಲ್ಲಿ ಕೆಲ ಹೊತ್ತಿನವರೆಗೇನೋ ಆತ ಕೆಲಸ ಮಾಡಿದ; ಆದರೆ ಬಳಿಕ ಆವನಲ್ಲಿ ನಿಂತಿರಲು ಶಕ್ತಿಯಿರಲಿಲ್ಲ. ಕಾಲುಗಳೆರಡೂ ಗಡಗಡನೆ ನಡುಗಲಾರಂಭಿಸಿದುವು. ಆ ಸಮಯದಲ್ಲಾತನು ಇತರರ ಜೀವವುಳಿಸುವ ಸಲುವಾಗಿ ತನ್ನ ಜೀವನವನ್ನು ಕಡೆಗಣಿಸಿ ಅದಾವ ವೀರತೆಯನ್ನು ಪ್ರದರ್ಶಿಸಿದ್ದನೋ, ಅದರ ಮುಂದೆ ವಿಜಯಿಯಾದ ಸೇನಾಪತಿಯೊಬ್ಬನ ಶೌರ್ಯವೂ ತುಚ್ಛವೇ ಸರಿ!

ಪಾರ್ಮಿಂಟರನು ದಣಿದು ಕುರ್ಚಿಯ ಮೇಲೆ ಕುಳಿತು ಬಿಟ್ಟನು. ಜೇಬಿನಿಂದ ಗಡಿಯಾರ ತೆಗೆದು ನೋಡಿದ; ರಾತ್ರಿ ಒಂದು ತಾಸು ಹೊಡೆದಿತ್ತು. ಆವನು ತನ್ನಲ್ಲೇ:—ಒಂದು ಹೊಡೆದಾಯಿತು; ಆದರೆ ಹಾಬ್ಸ ನಿನ್ನೂ ಕಣ್ಣಿಗೆ ಬೀಳಲಿಲ್ಲ. ಏನಾಯಿತು? ದಾರಿಯಲ್ಲೇನಾದರೂ ಅಪಘಾತವೊದಗಿತೇ?

ನಿಜವಾಗಿಯೂ ಮಾರ್ಗದಲ್ಲಿ ಹಾಬ್ಸನ ಮೇಲೆ ಸಂಕಟ ಬಂದಿದ್ದಿತು. ಅವನು ವೆಸ್ಟಡೆಲ್ಲ ಜಂಕ್ಷನಕ್ಕೆ ಬರುತ್ತಾ ಕಾಲು ಜಾರಿ ಬಿದ್ದಿದ್ದನು! ಇದರಿಂದ ಅವನ ಕಾಲೊಂದು ಮುರಿದು ಹೋಗಿದ್ದಿತು. ಕಂದಕದಿಂದೆದ್ದು ಹೊರಬರುವ ಶಕ್ತಿ ಅವನಲ್ಲಿರಲಿಲ್ಲ. ವೆಸ್ಟಡೆಲ್ಲ ಜಂಕ್ಷನು ಆ ಸ್ಥಳಕ್ಕೆ ಒಂದು ಮೈಲು ದೂರದಲ್ಲಿದ್ದಿತು. ಮಂಜಿನಿಂದ ಮುಚ್ಚಿಹೋದ ಕಾರಣ ಹಾಬ್ಸನ ಜೀವನವು ಅಪಾಯಕ್ಕೆ ಸಿಲುಕಿದ್ದಿತು.

ಆದರೆ ಪಾರ್ಮಿಂಟರನು ಈ ದುರ್ಘಟನೆಯ ವಿಷಯವನ್ನು ತಿಳಿಯುವುದೆಂತು? ಹಾಬ್ಸನಿನ್ನೂ ಬರಲಿಲ್ಲವೇಕೆಂದು ತಿಳಿಯಲೋಸುಗ ಆತನು ಟೆಲಿಫೋನಿನ ಬಳಿಗೆ ಹೋದನು; ಆದರೆ ತಲೆ ತಿರುಗಿ ಬಂದ ಕಾರಣ ಥಕ್ಕನೆ ಕುಳಿತು ಬಿಟ್ಟನು. ಮೈಯ ರಕ್ತವೆಲ್ಲ ತಲೆಗೇರುತ್ತಿದೆಯೆಂಬಂತೆ ಭಾಸವಾಯಿತು. ಕಾಲ ಕೆಳಗಿನ ನೆಲವೇ ತಪ್ಪಿಹೋಗುವಂತಿದ್ದಿತು.

ಕ್ಷಣ ಕಾಲದ ವರೆಗೆ ಪಾರ್ಮಿಂಟರ ಚಿಂತಿತನಾಗಿದ್ದ. ಎಕ್ಸಪ್ರೆಸ್ಸು ಬರುವ ಸಮಯವಾಗಿದ್ದಿತು. ಆವನು ಲೈನಕ್ಲಿಯರ ತಿಳಿಸಿಬಿಟ್ಟಿದ್ದ. ವಿಗ್ನನೆಗೆ ಈ ವಿಷಯ ಸೂಚಿಸಿ, ಕಾರ್ನಮೂರ ಸ್ಟೇಶನಿಗೊಂದು ಪ್ರಶ್ನೆ ಕೇಳಿದ. ಉತ್ತರ ಸಿಕ್ಕಿದ ಕೂಡಲೆ 'ಸಿಗ್ನಲ್ಲ ಪೋಸ್ಟಿ'ಗೆ ತಗಲಿದ್ದ ಲಿವ್ಹರವನ್ನೆಳೆದು, 'ಡಿಸ್ಟೆಂಟ ಸಿಗ್ನಲ್ಲ'ದ ಹಸರು ದೀಪವನ್ನು ಕೆಳಗೆ ತೂಗಿಸಿ

ದನು. ಅದನ್ನು ನೋಡಿ, ಎಕ್ಸಪ್ರೆಸ್ಸಿನ ಡ್ರಾಯವ್ಹರನು ಉತ್ತರದ ದಿಕ್ಕಿನ ಲೈಲು ಸರಿಯಿದೆಯೆಂದು ಅರಿತುಕೊಳ್ಳುವನು.

ಆದರೆ ಪಾಯಿಂಟರನ ಅವಸ್ಥೆಯು ತೀರ ಶೋಚನೀಯವಾಗಿ ಪರಿಣಮಿಸಿತು. ಈಗ ಆತನಲ್ಲಿ ಕೆಲಸ ಮಾಡುವ ಶಕ್ತಿ ಎಷ್ಟೆಷ್ಟೂ ಇರಲಿಲ್ಲ. ತನ್ನೊಳಗೇ ಯೋಚಿಸಹತ್ತಿದ:— ಹಾಬ್ಸನು ಖಂಡಿತವಾಗಿ ಆವುದೋ ವಿಪತ್ತಿಗೆ ತುತ್ತಾಗಿರುವನು. ದೇವರು ಇಂದು ನನ್ನ ಮರ್ಯಾದೆಯನ್ನುಳಿಸಿದನು. ಇಷ್ಟು ಕೆಲಸ ಮಾಡುವಷ್ಟು ಬಲವು ಈ ದೇಹದಲ್ಲಿ ಇರಲಿಲ್ಲ. ಎಕ್ಸಪ್ರೆಸ್ಸಿಗೆ ಲೈನಕ್ಲಿಯರ ತಿಳಿಸಿಯಾಯಿತು. ಇನ್ನು ಪ್ರಾಯಶಃ ರಾತ್ರಿಯ ಮುಖ್ಯ ಕೆಲಸವು ಆದಂತೆಯೇ ಸರಿ; ಆದರೂ ಇನ್ನೂ ಹಲವು ಕೆಲಸಗಳು ಉಳಿದಿವೆ. ಹಾಬ್ಸನು ಬಾರದೆ ಇದ್ದ ಪಕ್ಷದಲ್ಲಿ ಉಳಿದ ಕೆಲಸವನ್ನು ನಾನೇ ಮಾಡಬೇಕಾಗುವದು. ಬೆಳಗಾಗುವದಕ್ಕೆ ಮೊದಲು ನನಗೆ ಬಿಡುವು ದೊರೆಯದು. ಇನ್ನು ಅರೆ ತಾಸಿನಲ್ಲಿಯೇ ಪ್ಯಾಸೆಂಜರ ಟ್ರೇನು ಬರುವುದು. ಅದರ ಮೇಲೆ ಒಂದು ಮಾಲು ಗಾಡಿ ಬರುವುದು. ತರುವಾಯ ಮೂರು ಎಂಜಿನ್............

ಫಕ್ಕನೆ ತಲೆಗೆ ಕುಟ್ಟಿಕೊಂಡು ಪಾಯಿಂಟರ ಕೂಗಿದನು:—ಸರ್ವನಾಶವಾಯಿತು! ನಾನು 'ಮೇನ್ ಲೈನಿ'ನಿಂದ ಒಂದು ಎಂಜಿನವನ್ನಿನ್ನೂ ತೆಗೆಯಿಸಲಿಲ್ಲ.

ಅವನೆಂದುದು ನಿಜವಾಗಿತ್ತು. ಸಿಗ್ನಲ್ಲರನು ಕಡು ಮೂರ್ಖನಲ್ಲದಿದ್ದಲ್ಲಿ ಇಂತಹ ಕೆಲಸವಾಗುತ್ತಿರಲಿಲ್ಲ. ಪಾಯಿಂಟರನು ನಿಪುಣ ಸಿಗ್ನಲ್ಲರನಾಗಿದ್ದನು; ಅವನಿಂದ ಇಂತಹ ಮರುವಾಗುವ ಸಂಭವವಿದ್ದಿಲ್ಲ; ಆದರೆ ಅಸ್ವಸ್ಥತೆಯ ಮೂಲಕ ಆತನ ಮಿದುಳು ಇಂದು ಸರಿಯಿದ್ದಿಲ್ಲ. ಆದುದರಿಂದಲೇ ಈ ತಪ್ಪಾಯಿತು! ಎಕ್ಸಪ್ರೆಸ್ಸು ಬರುವುದರೊಳಗಾಗಿ ಆ ಎಂಜಿನವನ್ನು ಸೆಂಟಿಂಗ ಮಾಡಿಸಿ, ಸೈಡಿಂಗಿನಲ್ಲಿಡುವುದು ಅವನ ಕರ್ತವ್ಯವಾಗಿದ್ದಿತು; ಆದರೆ ಆತನು ಹಾಗೆ ಮಾಡಲಿಲ್ಲ. ಆದಾವ ಲೈನಿನಲ್ಲಿ ಆ ಎಂಜಿನವು ನಿಂತಿದ್ದಿತೋ, ಅದೇ ರೈಲಿನಲ್ಲಿ ತಾಸಿಗೆ ಅರವತ್ತು ಮೈಲು ಸ್ಪೀಡಿನಿಂದ ಎಕ್ಸಪ್ರೆಸ್ಸು ಬರುತ್ತಿದ್ದಿತು. ಆ ಕಾರಣ ಆ ಎಂಜಿನಕ್ಕೆ ಎಕ್ಸಪ್ರೆಸ್ಸು ಢಿಕ್ಕಿ ಹೊಡೆಯುವುದು ನಿಶ್ಚಯವೆಂದು ಅವನು ಅರಿತುಬಿಟ್ಟನು.

ಆದರೆ ಇನ್ನು ಸಂಶೋಧನೆಗೆ ಸಮಯವುಳಿದಿರಲಿಲ್ಲ. ಪಾಯಿಂಟರನು ವ್ಯಗ್ರಭಾವದಿಂದ ಓಡುತ್ತ ಸಿಗ್ನಲ್ಲಿನ ಕಡೆಗೆ ನಡೆದನು. ಹಸುರು ದೀಪವನ್ನು ತೆಗೆದು ಕೆಂಪು ದೀಪ ಮಾಡಲೆಳಸಿದ್ದನು; ಆದರೆ ಹಾ! ಕೆಂಪು ದೀಪವನ್ನು ತಿರುಗಿಸಲು ಸಾಮರ್ಥ್ಯ ಸಾಲದೆ ಆತ ಮೂರ್ಛಿತನಾಗಿ ಬಿದ್ದು ಬಿಟ್ಟನು!

ಎಕ್ಸಪ್ರೆಸ್ಸನ್ನು ಕಾಪಾಡುವವನ ಅವಸ್ಥೆ ಹೀಗಾಯಿತು. ಟ್ರೇನು ವಾಯುವೇಗದಿಂದ ವೆಸ್ಟಡೆಲ್ಲ ಜಂಕ್ಷನಿನ ಕಡೆಗೆ ಓಡಿಬರುತ್ತಿದ್ದಿತು. ಕಟ್ಟ ಕಡೆಗೆ ಆ ಎಕ್ಸಪ್ರೆಸ್ಸ ಟ್ರೇನು ಆ ಎಂಜಿನಕ್ಕೆ ಬಂದು ಬಡಿಯಿತು! ಈ ಭಯಾನಕ ಸಂಘರ್ಷಣದಿಂದಾದ ಶಬ್ದವನ್ನು ಬಣ್ಣಿಸಲಳವಲ್ಲ! ಆ ನೀಳವಾದ ಟ್ರೇನು ಪ್ರಚಂಡ ಭೂಕಂಪದಂತೆ ಲೈನಿನಿಂದ ಕೆಳಗುರುಳಿತು.

ಸಿಗ್ನಲ್ಲರನ ಡ್ಯೂಟಿಯಿಂದ ಎಂತಹ ಸರ್ವನಾಶವಾಗಬಹುದೆಂಬದನ್ನು ಸ್ಮಿತ್ತನು ಕೆಲಹೊತ್ತಿನ ಮುಂಚೆ ಬ್ಲೇಕನೊಂದಿಗೆ ಆಲೋಚಿಸಿದ್ದನು; ಆದರೆ ಆ ಸಮಯದಲ್ಲಾತನು ತನ್ನ ಭಾಗ್ಯದಲ್ಲಿಯೂ ಈ ಭೀಷಣವಾದ ಅನರ್ಥವು ಬರೆದಿರಬಹುದೆಂಬ ಕಲ್ಪನೆಯನ್ನಾದರೂ ಮಾಡಿರಬಹುದೇ?

## ಕಾನೂನಜ್ಞರ ಅವಶ್ಯಕತೆ

ಆದಾವ ಎಂಜಿನಕ್ಕೆ ಎಕ್ಸಪ್ರೆಸ್ಸು ಢಿಕ್ಕಿ ಬಡೆದಿದ್ದಿತೋ, ಆ ಎಂಜಿನದ ಡ್ರಾಯವ್ಹರನು ಅನತಿ ದೂರದಲ್ಲಿ ಎಕ್ಸಪ್ರೆಸ್ಸಿನ ಬೆಳಕನ್ನು ನೋಡಿ ಎಂಜಿನವನ್ನಲ್ಲಿಂದ ಸರಿಸಲು ಪೇಚಾಡಿದನು; ಆದರೆ ಅವನ ಪೇಚಾಟವು ಫಲಕಾರಿಯಾಗಲಿಲ್ಲ. ಎಕ್ಸಪ್ರೆಸ್ಸು ಭರದಿಂದ ಬಂದು ಅದಕ್ಕಪ್ಪಳಿಸಿತು. ಇದರಿಂದ ಎಂಜಿನವು ನುಚ್ಚುನೂರಾಗಿ ಹೋಯಿತು. ಎಕ್ಸಪ್ರೆಸ್ಸಿನ ಬಂಡಿಗಳೂ ಹಲವಾರು ಹಳಿಯಿಂದ ತಪ್ಪಿ ಮಗುಚಿದವು. ಅನೇಕ ಬಂಡಿಗಳು ಎತ್ತರದ ಆಣೆಕಟ್ಟಿನ ಅಡಿಯಲ್ಲಿ ಬಿದ್ದು ಪುಡಿ-ಪುಡಿಯಾದವು. ಅಂತೂ ಈ ಎಲ್ಲ ಪ್ರಸಂಗವು ಕ್ಷಣಮಾತ್ರದಲ್ಲೇ ಆಯಿತು.

ಇದೇ ಟ್ರೇನಿನಲ್ಲಿ ನಮ್ಮ ಪೂರ್ವ ಪರಿಚಿತನಾದ ಬ್ಲೇಕನು ತನ್ನ ಸಹೋದ್ಯೋಗಿಯೊಂದಿಗೆ ಕುಳಿತಿದ್ದನೆಂದು ಓದುಗರಿಗೆ ನೆನಪಿರಬಹುದು.

ಅವರು ಕುಳಿತ ಬಂಡಿಯು ಕಟ್ಟಿನಡಿ ಬೀಳುತ್ತಲೆ ಅವರಿಬ್ಬರೂ ಕಿಟಕಿಯು ಮಾರ್ಗವಾಗಿ ಹೊರಗೆ ಬಂದರು. ಈ ದುರ್ಘಟನೆಯಿಂದ ಅವರು ಆಹತ ರೇನೋ ಆಗಿದ್ದರೂ, ಪೆಟ್ಟು ಆಳವಾಗಿ ತಗಲಿರಲಿಲ್ಲ. ಬ್ಲೇಕನ ತಲೆಗೂ ಸ್ಮಿತ್ತನ ಕೈಗೂ ಸ್ವಲ್ಪ ಪೆಟ್ಟಾಗಿತ್ತು ಅಷ್ಟೇ.

ಬಂಡಿಯಿಂದೀಚೆಗೆ ಬಂದು ಅವರಿಬ್ಬರೂ ಸುತ್ತಲೂ ನೋಡಿದರು. ಭಯಭೀತರ, ದುಃಖಿತರ ಹಾಗೂ ಗಾಯಗೊಂಡವರ ಆರ್ತನಾದವು ಅವ ರಿಗೆ ಕೇಳಿಸಿತು. ಗಾಯವಾಗಿದ್ದರೂ ಜೀವದ ಹೆದರಿಕೆಯಿಂದ ಹೇಗಾದರೂ ಬಂಡಿಯಿಂದ ಈಚೆಗೆ ಬಂದಿದ್ದವರೊಳಗೆ ಅಧಿಕಾಂಶ ಜನರು ಕಾಲ್ಮುರಿದು ಹೋಗಿದ್ದರಿಂದ, ನೆಲದಲ್ಲಿ ಬಿದ್ದು ರೋದಿಸುತ್ತಿದ್ದರು. ಇನ್ನು ನಡೆಯಲು ತ್ರಾಣವಿದ್ದವರಿಗೆ ಆ ಭಯಂಕರ ಚಳಿಯ ನಟ್ಟಿರುಳಿನಲ್ಲಿ ಎಲ್ಲಿಯೂ ಆಶ್ರಯ ದೊರೆಕಲು ಆಸ್ಪದವಿರಲಿಲ್ಲ.

ಎಂತಹ ಭೀಷಣ ದುರ್ಘಟನೆಯಪ್ಪಾ! ಬಹಳ ಜನರು ಮಡಿದಿರ ಬೇಕೆಂದು ನನಗನಿಸುತ್ತದೆ, ಬ್ಲೇಕನಂದನು.

ಸ್ಮಿತ್ತ—ಈಗ ನಾವು ಮಾಡಬೇಕಾದುದೇನು? ಇಂದಿನ ಪಯಣ ದಲ್ಲಿ ನಾವು ಉಳಿದುಕೊಂಡುದೇ ದೇವರ ದಯೆ. ಈಗಲಾದರೋ ಗಾಯ ಗೊಂಡವರಿಗೆ ಸಹಾಯ ಮಾಡುವುದೇ ನಮ್ಮ ಕರ್ತವ್ಯ.

ಬ್ಲೇಕ—ನೀನಂದುದು ಯುಕ್ತವೇ ಸರಿ; ಆದರೆ ಈ ಕಗ್ಗತ್ತಲೆಯಲ್ಲಿ ನಾವು ಗಾಯಗೊಂಡವರಿಗೆ ಸಹಾಯ ಮಾಡುವುದು ಹೇಗೆ? ಆಗಲಿ. ನಡೆ, ಒಮ್ಮೆ ಯತ್ನಿಸೋಣ.

ಸ್ಮಿತ್ತನನ್ನು ಕರೆದುಕೊಂಡು ಬ್ಲೇಕನು ಗಾಯಪಟ್ಟವರ ಬಳಿಗೆ ಹೋಗಿ ಅವರ ಸ್ಥಿತಿ-ಗತಿಯನ್ನು ನೋಡತೊಡಗಿದನು; ಆದರೆ ಕತ್ತಲೆ ಯಾದ ಕಾರಣ ಅವರಿಗೆ ಏನನ್ನೂ ನೋಡಲಾಗಲಿಲ್ಲ. ಆದರೂ ತಾವು ಅನುಮಾನಿಸಿದುದಕ್ಕಿಂತ ಬಹಳ ಕಡಿಮೆ ಜನರು ಮಡಿದಿರುವರೆಂದು ಅವರಿಗೆ ಗೊತ್ತಾಯಿತು. ಗಾಯಪಟ್ಟವರ ಸಂಖ್ಯೆಯೇ ಹೇರಳವಾಗಿದ್ದಿತು. ಎಂಜಿನದ ಸಮೀಪದ ಹಲವು ಬಂಡಿಗಳಿಗೆ ಹೆಚ್ಚಿಗೆ ಹಾನಿಯುಂಟಾ ಗಿದ್ದಿತು.

ಎಂಜಿನಿನ ಮತ್ತು ಎಕ್ಸಪ್ರೆಸ್ಸಿನ ಡ್ರಾಯವ್ಹರರು ಕೆಳಗೆ ಹಾರಿ ಜೀವ ವೇನೋ ಉಳಿಸಿಕೊಂಡಿದ್ದರು; ಆದರೆ ಅವರಿಗೂ ಅಲ್ಪಸ್ವಲ್ಪ ಪೆಟ್ಟಾಗಿದ್ದಿತು.

ಈಗಲೂ ಗಾಳಿಯು ವೇಗವು ಕಡಿಮೆಯಾಗಿರಲಿಲ್ಲ. ಬ್ಲೇಕನು ಬಹಳ ಹೆಣಗಾಡಿ ಒಂದು ಲಾಂದ್ರವನ್ನು ಹಚ್ಚಿ, ಗಾಯಗೊಂಡವರ ಹತ್ತಿರ ಹೋದನು. ಎಂಜಿನಿನ ಬಳಿಯಲ್ಲೊಂದು ಬಂಡಿಯು ಉರಿಯುತ್ತಿದ್ದುದು ಅವನಿಗೆ ಕಂಡಿತು. ಆ ಬಂಡಿಯಲ್ಲಿ ಅನೇಕ ಜನರಿದ್ದರು. ಅದರ ಬಾಗಿಲು ಗಳಿಗೆ ಬೀಗ ಹಾಕಿದ್ದಿತು. ಆದುದರಿಂದ ಯಾರೂ ಬಂಡಿಯೊಳಗಿಂದ ಹೊರಬರಲಾರದಾಗಿದ್ದರು. ಬೆಂಕಿಯು ಆ ಬಂಡಿಗೂ ತಗಲಿ ಹೋಗಿದ್ದಿತು. ಬಂಡಿಯೊಳಗಿನವರು ಅರಚುತ್ತ:—ನಾವು ಸತ್ತೆವು! ಯಾರಿದ್ದಾರೆ? ಬಾಗಿಲು ತೆರೆಯಿರಿ, ನಮ್ಮನ್ನುಳಿಸಿರಿ, ಎಂದು ಬೊಬ್ಬಿಟ್ಟರು.

ಬ್ಲೇಕನು ಸ್ಮಿತ್ತನೊಡನೆ ಆ ಕಡೆಗೆ ಹೋದನು; ಹಾಗು ಅವರಿಗೆ ನೆರವಾಗಲು ಸಿದ್ಧನಾದನು.

ಮೊಟ್ಟಮೊದಲು ಇವರನ್ನು ಬಂಡಿಯಿಂದೀಚೆಗೆ ಎಳೆದು ತೆಗೆಯುವು ದಗತ್ಯ, ಸ್ಮಿತ್ತನೆಂದ.

ಬ್ಲೇಕ—ಹೇಗೆ ತೆಗೆಯುವೆ? ಬಂಡಿಯ ಬಾಗಿಲುಗಳು ಮುಚ್ಚಿವೆ. ಆಯುಧವೇನಾದರೂ ಸಿಕ್ಕಿದ್ದರೆ ಬಾಗಿಲವನ್ನೊಡೆಯಲೆತ್ನಿಸಬಹುದಾಗಿತ್ತು.

ಘಟನಾ ಸ್ಥಳದ ಹತ್ತಿರದಲ್ಲಿ ಕೆಲ ಗುಡಿಸಲುಗಳಿದ್ದವು. ಬಂಡಿಗೆ ಬೆಂಕಿ ಹಿಡಿದುದನ್ನು ಕಂಡು ಮತ್ತು ಪ್ರಯಾಣಿಕರ ಆರ್ತನಾದವನ್ನು ಕೇಳಿ, ಹಲವಾರು ಕೃಷಿಕರು ಹಾರೆ-ಕೊಡಲಿ ಮುಂತಾದವುಗಳನ್ನು ತೆಗೆದು ಕೊಂಡು ಟ್ರೇನಿನ ಬಳಿಗೋಡಿ ಬಂದರು; ಆದರೆ ಅವರು ರಕ್ಷಿಸಲೆತ್ನಿಸುವ ಮೊದಲೇ ಬಂಡಿಯ ಸುತ್ತಲೂ ಬೆಂಕಿಯು ಆವರಿಸಿ ಹೋಗಿದ್ದಿತು. ಆ ಅಗ್ನಿಚಕ್ರದ ಸನಿಹಕ್ಕೆ ಹೋಗಲು ಯಾರಿಗೂ ಧೈರ್ಯವಾಗಲಿಲ್ಲ. ನೋಡ ನೋಡುತ್ತಿದ್ದಂತೆಯೇ ಇತರ ಬಂಡಿಗಳಿಗೂ ಬೆಂಕಿ ತಗಲಿತು. ಆ ಅಗ್ನಿ ಶಿಖೆಯಿಂದ ಆಗಸದ ಹಲವಂಶವು ಪ್ರಕಾಶಿತವಾಯಿತು.

ಪ್ರಥಮಶ್ರೇಣಿಯ ಬಂಡಿಯೊಂದರಲ್ಲಿ ಇದ್ದ ಇಬ್ಬರು ಪ್ರಯಾಣಿಕರಿಗೆ ತುಂಬಾ ಪೆಟ್ಟಾಗಿದ್ದಿತು. ಕೆಲವು ಕೃಷಿಕರು ಸೇರಿ, ಅವರನ್ನೆತ್ತಿಕೊಂಡು ಒಂದು ಮನೆಗೊಯ್ದರು. ಆ ಮನೆಯ ಹೆಸರು 'ಬ್ರಾನ ಸ್ಟೇಜ' ಈ ಮನೆಯು ಘಟನಾ ಸ್ಥಳದಿಂದ ಒಂದು ಮೈಲು ದೂರದಲ್ಲಿತ್ತು.

ಈ ಎಕ್ಸಪ್ರೆಸ್ಸಿನಲ್ಲಿ ಯಾವುದೋ ಟೆಲಿಗ್ರಾಫ ಆಫೀಸಿನ ಸಿಗ್ನಲ್ಲರ ನೊಬ್ಬನಿದ್ದನು. ಅವನು ಕ್ರಿಸ್‌ಮಸ್ಸಿನ ರಜೆಯಲ್ಲಿ ಸ್ಕಾಟಲಂಡಕ್ಕೆ ತಿರು

ಗಾಡಿಕೊಂಡು ಬರಲು ಹೋಗುತ್ತಿದ್ದನು. ಅವನು ವೆಸ್ಟಡೆಲ್ಲಿನ ಟೆಲಿಗ್ರಾಫ್ ಆಫೀಸಿಗೆ ಕೂಡಲೆ ಹೋಗಿ ನೋಡಿದ. ಅಲ್ಲಿ ಸಿಗ್ನಲ್ಲರನು ಮೂರ್ಛಿತನಾಗಿ ಬಿದ್ದಿದ್ದನು! ಅವನು ಆತನನ್ನು ಎಚ್ಚರಗೊಳಿಸುವ ಪ್ರಯತ್ನಕ್ಕೆ ಹೋಗದೆ, ತಂತೀ ಮೂಲಕ ಬೇರೆ ಬೇರೆ ಸ್ಟೇಶನ್ನುಗಳಿಗೆ ಈ ಸುದ್ದಿಯನ್ನು ತಿಳಿಸಿದನು. ಆ ಮೇಲೆ ಮೂರ್ಛಿತ ವ್ಯಕ್ತಿಯ ಶುಶ್ರೂಷೆ ಮಾಡಿದನು.

ಬೆಳಗಾಗುವಾಗ ಅಲ್ಲಿ ಒಂದು ಬಂಡಿಯೂ ಕಾಣಸಿಗಲಿಲ್ಲ; ಎಲ್ಲವೂ ಸುಟ್ಟು ಬೂದಿಯಾಗಿ ಹೋಗಿದ್ದುವು. ಬೆಳಿಗ್ಗೆ ಪಾರ್ಮಿಂಟರನು ಅವನ ಮನೆಗೆ ತಲುಪಿಸಲ್ಪಟ್ಟನು. ಉತ್ತರದಿಂದಲೂ ದಕ್ಷಿಣದಿಂದಲೂ 'ರಿಲೀಫ್ ಟ್ರೇನಿ'ನಲ್ಲಿ ಹಲವಾರು ರೇಲ್ವೆ ಕೆಲಸಗಾರರೂ ಡಾಕ್ಟರರೂ ಪೋಲೀಸ ಅಧಿಕಾರಿಗಳೂ ಘಟನಾ ಸ್ಥಳಕ್ಕೆ ಬಂದು ನೊಂದವರ ಸೇವಾ-ಶುಶ್ರೂಷೆ ಮಾಡಲಾರಂಭಿಸಿದರು. ಸಾಮಾನ್ಯ ಪೆಟ್ಟಾದವರನ್ನು ಬಂಡಿಯಲ್ಲಿ ಕುಳ್ಳಿರಿಸಿ, ಬೇರೆ ಕಡೆಗೆ ಸಾಗಿಸಲಾಯಿತು.

ಬ್ಲೇಕನು ತನ್ನ ಗಂತವ್ಯ ಸ್ಥಳಕ್ಕೆ ಹೋಗುವುದನ್ನು ಮುಂದುವರಿಸಿಬಿಟ್ಟನು. ಗ್ಲಾಸಗೋದಲ್ಲಿ ಯಾರಲ್ಲಿಗೆ ಹೋಗಬೇಕೆಂದೆಣಿಸಿದ್ದನೋ, ಅವರಿಗೆ ತಂತಿದ್ವಾರಾ ಸುದ್ದಿಯನ್ನೆಲ್ಲ ತಿಳಿಸಿ, ಪಾರ್ಮಿಂಟರನ ನಿವಾಸ ಸ್ಥಳಕ್ಕೆ ನಡೆದನು. ಅಲ್ಲಿ ಪಾರ್ಮಿಂಟರನನ್ನು ಸ್ವಲ್ಪ ಸ್ವಸ್ಥಗೊಳಿಸಿ, ಅವನ ಹೆಂಡತಿಗೆ ಆಶ್ವಾಸನೆಯಿತ್ತು, ಊಟ ಮಾಡುವ ಸಲುವಾಗಿ 'ಬ್ರೌನ ಸ್ಟೇಜ'ಗೆ ಹೋದನು.

ಬ್ಲೇಕನು ಆ ಮನೆಯ ಬಳಿ ಹೋಗುತ್ತಲೆ ಒಬ್ಬ ಮನುಷ್ಯನು ತುಂಬಾ ವ್ಯಗ್ರಭಾವದಿಂದ ಮುಂದೆ ಬಂದು, ಆತನನ್ನು ಕುರಿತು ಪ್ರಶ್ನಿಸಿದನು:—ಮಹೋದಯ, ಘಟನಾ ಸ್ಥಳದಲ್ಲಿ ಯಾರಾದರೂ ಕಾನೂನು ಬಲ್ಲವರು ಸಿಗಬಹುದೇ?

ಬ್ಲೇಕನು ಉತ್ತರಿಸಿದನು:—ಟ್ರೇನಿನಲ್ಲಿ ಒಬ್ಬಿಬ್ಬರು ಬ್ಯಾರಿಸ್ಟರರು ಇದ್ದಿರಲಿಕ್ಕಿಲ್ಲವೆಂದು ಹೇಳಬರುವುದಿಲ್ಲ; ಆದರೆ ಈ ಸಮಯದಲ್ಲವರು ಪತ್ತೆಯಾಗುವರೋ ಇಲ್ಲವೋ ಸಂದೇಹ. ಏಕೆಂದರೆ, ಪ್ರಾಯಶಃ ಎಲ್ಲರೂ ಬೆಳಗಿನ ಗಾಡಿಯಲ್ಲಿ ಹೊರಟು ಹೋಗಿರುವರು. ನನ್ನಿಂದ ನಿಮಗೇನಾದರೂ

ಉಪಕಾರವಾಗಬಹುದಾಗಿದ್ದರೆ, ಅದಕ್ಕಾಗಿ ನಾನು ಸಿದ್ಧಳಿರುವೆನು. ನಾನು ಬ್ಯಾರಿಸ್ಟರಿ ಪ್ಯಾಸಾಗಿ ಕೆಲ ದಿನ ಕಚೇರಿಯ ಧೂಳಿ ನುಂಗಿರುವೆನು.

ಆ ಮನುಷ್ಯ—ನಿಮ್ಮಿಂದ ಆ ಕೆಲಸವಾದೀತು. ನನ್ನ ಹೆಸರು ಡಾಕ್ಟರ ಬ್ರಾಡಿಯೆಂದು. ನಾನು ಕಾರ್ನಪೂರ ಆಸ್ಪತ್ರಿಯ ಡಾಕ್ಟರನು. ನಿನ್ನೆಯ ಬಂಡಿಯಲ್ಲಿ ಒಬ್ಬ ಭದ್ರಪುರುಷರು ಗಾಯಗೊಂಡಿರುವರು. ಅವರು ಬದುಕುವ ಆಶೆಯಿಲ್ಲ. ಹೀಗಾಗಿ ಅವರು ತಮ್ಮ ಉಯಿಲನ್ನು ಬರೆಯಿಸಲು ಆತುರಗೊಂಡಿರುವರು. ತಾವು ದಯಮಾಡಿ ನನ್ನ ಜೊತೆಗೆ ಬರೋಣವಾಗಲಿ. ಅವರು ಬಹಳ ಹೊತ್ತಿನ ವರೆಗೆ ಮೂರ್ಛಿತರಾಗಿದ್ದು, ಈಗ ಎಚ್ಚರಗೊಂಡಿದ್ದಾರೆ; ಆದರೆ ಅವರ ಸ್ಥಿತಿಯನ್ನು ನೋಡಿದರೆ, ಕೆಲವೇ ಹೊತ್ತಿನಲ್ಲಿ ಪ್ರಾಣಾಂತವಾಗಲಿದೆಯೆಂದು ತೋರುತ್ತದೆ.

## ಹೊಸ ಮರಣ ಶಾಸನ

ಬ್ಲೇಕನು ಆ ಮನೆಯ ವಿಶಾಲವಾದ ಕೋಣೆಯೊಳಗೆ ಹೊಕ್ಕನು. ಆ ಕೋಣೆಯಲ್ಲಿ ಕಿಟಕಿಯ ಹತ್ತಿರ ಒಬ್ಬ ವೃದ್ಧ ಪುರುಷನು ಮಲಗಿದ್ದನು. ಆ ಪುರುಷನ ಮೊಗವನ್ನು ನೋಡಿದಲ್ಲಿ ಅವನು ಜರ್ಮನ್ನನೆಂದು ಕಂಡು ಬರುತ್ತಿದ್ದಿತು. ಅವನ ಮುಖದಲ್ಲಿ ವೇದನೆಯ ಭಾವವು ಹೊರಸೂಸುತ್ತಿದ್ದಿತು.

ಡಾಕ್ಟರನು ಅವನ ಮುಖದ ಭಾವವನ್ನು ಅರಿತು ಹೇಳಿದನು:— ನನಗೆ ಹೆಚ್ಚು ದೂರ ಹೋಗಬೇಕಾಗಿ ಬರಲಿಲ್ಲ. ದೇವರ ದಯೆಯಿಂದ ಹೋಟೆಲಿನ ಬಾಗಿಲಿನಲ್ಲಿಯೇ ಈ ಮಹಾನುಭಾವರು ಸಿಕ್ಕಿದರು. ಇವರು ಒಬ್ಬ ಬ್ಯಾರಿಸ್ಟರರು.

ಬ್ಲೇಕನು ನುಡಿದನು:—ನಾನು ಬ್ಯಾರಿಸ್ಟರಿ ಪ್ಯಾಸೇನೋ ಆಗಿರುವೆನು; ಆದರೆ ಅದು ನನ್ನ ಉದ್ಯೋಗವಲ್ಲ. ನಾನು ಏನು ಮಾಡಬೇಕೆಂಬುದು ತಿಳಿಸೋಣಾಗಲಿ. ನನ್ನಿಂದಾಗಬಹುದಾದುದನ್ನು ತಮ್ಮ ಸಲುವಾಗಿ ಮಾಡಲು ಬೇಸರಿಯೆನು.

ವೃದ್ಧ ಮಹಾಶಯನು ಭಗ್ನ ಸ್ವರದಲ್ಲಿ:—ಧನ್ಯವಾದ! ತಾವು ಕಷ್ಟಪಟ್ಟು ನನಗೆ ಉಪಕಾರ ಮಾಡಲೋಸುಗ ಬಂದಿರುವಿರಿ. ಅದಕ್ಕಾಗಿ

ನಾನು ನನ್ನ ಹೃತ್ಪೂರ್ವಕ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ತಮ್ಮ ಹೆಸರೇನು? ನಾನು ತಿಳಿದುಕೊಳ್ಳಬಹುದೇ?

ಬ್ಲೇಕ—ನಾನೊಬ್ಬ ಸಾಧಾರಣ ಮನುಷ್ಯನು; ಬ್ಲೇಕನೆಂದು ನನ್ನ ಹೆಸರು.

ನನ್ನ ಹೆಸರು ಅರ್ಕಮನ್. ನಾನು ಜರ್ಮನ್ನನು; ಹಾಗು ಬರ್ಲಿನ್ ನಗರದಲ್ಲಿರುವವನು. ಬರ್ಲಿನದಲ್ಲಿಯೇ ನನ್ನ ವ್ಯಾಪಾರ-ವ್ಯವಹಾರವಿದೆ ಲಂಡನದಲ್ಲಿಯೂ ನನ್ನ ಕಾರ್ಯಭಾರವಿದೆ. ನನ್ನ ಏಕಮಾತ್ರ ಪುತ್ರನಾದ ಪೋಲನ ಮೇಲೆ ಲಂಡನದ ಯಾವತ್ತೂ ಕೆಲಸದ ಭಾರವಿರುತ್ತದೆ. ನನ್ನ ಹೆಂಡತಿಯು ತೀರಿಹೋಗಿ ಹಲವು ವರ್ಷಗಳಾದವು. ನನ್ನ ಮರಣದಿಂದ ಪೋಲನು ಶೋಕಾಕುಲನಾಗುವನು. ಮೃತ್ಯುಕಾಲದಲ್ಲಿ ಪ್ರಾಣಾಧಿಕನಾದ ಪೋಲನ ದರ್ಶನವಾಗಲಿಲ್ಲ. ಇದಕ್ಕಾಗಿ ನನಗೆ ತುಂಬಾ ವ್ಯಥೆಯಾಗಿದೆ. ಪ್ರಾಯಶಃ ಕಡೆಗಾಲದಲ್ಲಿ ನಾನು ಪುತ್ರನನ್ನು ಕಾಣಲು ಪರಮಾತ್ಮನಿಗೆ ಮನಸ್ಸಿಲ್ಲ ನಾನು ನನ್ನೊಬ್ಬ ಗೆಳೆಯ ನನ್ನು ಕಾಣಲು ಏಡಿನ್ಬರೋಕ್ಕೆ ಹೋಗುತಲಿದ್ದೆನು. ಮಾರ್ಗದಲ್ಲಿ ಈ ದುರ್ಘಟನೆಯೊದಗಿತು. ಮರಣಕ್ಕಿನ್ನು ಹೆಚ್ಚು ವಿಲಂಬವಿಲ್ಲವೆಂದು ನನಗೆ ಚೆನ್ನಾಗಿ ತೋರುತ್ತಿದೆ. ಈ ತೆರನಾಗಿ ಸಾಯಬೇಕಾಗುವುದೆಂದು ನಾನು ಕನಸಿನಲ್ಲಿಯೂ ನೆನಸಿರಲಿಲ್ಲ. ಕಳವಳಗೊಳ್ಳುವುದರಿಂದೇನೂ ಲಾಭವಿಲ್ಲ; ಹಾಗೆಂದೇ ನಾನು ದೇವರಿಗೆ ಸಂಪೂರ್ಣವಾಗಿ ಆತ್ಮಸಮರ್ಪಣೆ ಮಾಡಿರುವೆನು. ಅದಾಗ್ಯೂ ನನ್ನದು ಒಂದೇ ಒಂದು ಅಪೇಕ್ಷೆಯಿದೆ........

ಇಷ್ಟು ಮಾತಾಡಿ ಅರ್ಕಮನ್ನನು ತೇಗತೊಡಗಿದನು. ಸುಮಾರು ಐದು ನಿಮಿಷ ಸುಮ್ಮನಿದ್ದು ಮೆಲ್ಲಮೆಲ್ಲನೆ ಮಾತಾಡಹತ್ತಿದನು:— ಎಲ್ಲ ವಿಷಯವನ್ನೂ ಬಿಚ್ಚಿ ಹೇಳಲು ಈಗ ಸಮಯವಿಲ್ಲ ಯಾವ ಕೆಲಸದಲ್ಲಿ ತಮ್ಮ ಸಹಾಯವನ್ನಪೇಕ್ಷಿಸುವೆನೋ ಅದನ್ನೇ ಸ್ವಲ್ಪದರಲ್ಲಿ ತಿಳಿಸುವೆನು. ನಾನು ನನ್ನ ಪುತ್ರನ ವಿಷಯದಲ್ಲಿ ದೊಡ್ಡ ಅವಿಚಾರದ ಕೃತ್ಯವನ್ನೆಸಗಿರುವೆನು; ಆದರೆ ಈಗ ನಾನು ನನ್ನ ಮೊದಲಿನ ತ್ರುಟಿಯನ್ನು ಸಂಶೋಧಿಸುವಂತಹ ಕೆಲಸವನ್ನು ಮಾಡಬೇಕೆಂದಿರುವೆನು. ಬರ್ಲಿನ್ ನಗರದಲ್ಲಿ ನನ್ನ ಎಟರ್ನಿಯ ಹತ್ತಿರ ನಾನು ಬರೆದ ಮರಣಪತ್ರವೊಂದಿದೆ. ಪೋಲನ ಮೇಲೆ ಸಿಟ್ಟಾಗಿ ಬಹಳ ದಿನದ ಹಿಂದೆ ಆ ಉಯಿಲನ್ನು ಬರೆದಿದ್ದೆನು.

ಈಗ ಆದನ್ನು ರದ್ದುಪಡಿಸಿ, ನಿಮ್ಮ ಸಹಾಯದಿಂದ ಪೋಲನಿಗನುಕೂಲವಾದ ಇನ್ನೊಂದು ಉಯಿಲನ್ನು ಬರೆಯಬೇಕೆಂದು ಅಪೇಕ್ಷಿಸುತ್ತೇನೆ. ಈ ಉಯಿಲನ್ನು ಸಾಧ್ಯವಾದಷ್ಟು ಸಂಕ್ಷೇಪದಲ್ಲಿ ಬರೆಯಬೇಕು. ತಾವು ಕಾನೂನು ಬಲ್ಲವರು; ದಯವಿಟ್ಟು ನನ್ನ ದೇಹದಲ್ಲಿ ಜೀವವಿರುವುದರೊಳಗೆ ಉಯಿಲನ್ನು ಬರೆಯುವಂತೆ ವ್ಯವಸ್ಥೆ ಮಾಡೋಣಾಗಲಿ.

ಬ್ಲೇಕ—ಕೆಲಸವೇನೂ ಕಷ್ಟದ್ದಲ್ಲ. ನೀವು ನಿಶ್ಚಿಂತೆಯಿಂದ ನನ್ನ ಮೇಲೆ ಈ ಕೆಲಸದ ಭಾರವನ್ನು ಬಿಡಬಹುದು.

ಡಾ. ಬ್ರಾಡಿಯು ಒಡನೆ ಪಕ್ಕದ ಕೋಣೆಯಿಂದ ಲೇಖನಿಯನ್ನೂ ಮಸಿಕುಡಿಕೆ-ಕಾಗದಗಳನ್ನೂ ತೆಗೆದುಕೊಂಡು ಬಂದನು. ಬಳಿಕ ಅವನು ವೃದ್ಧನ ನಾಡೀ ಪರೀಕ್ಷೆಮಾಡಿ ಒಂದು ಮದ್ದನ್ನು ಕುಡಿಸಿದನು. ಆ ಮೇಲೆ ಇನ್ನೊಬ್ಬ ಗಾಯಪಟ್ಟವನನ್ನು ನೋಡಲು ಬೇರೆ ಕೋಣೆಗೆ ತೆರಳಿದನು.

ಬ್ಲೇಕನು ಮಂಚದ ಹತ್ತಿರ ಕುಳಿತು, ವೃದ್ಧನ ಮಾತೆಲ್ಲವನ್ನೂ ಕೇಳಿ ಝಟಪಟನೆ ಉಯಿಲನ್ನು ಬರೆದು ಹಾಕಿದನು. ಉಯಿಲು ಸಾಮಾನ್ಯ ಉಯಿಲಿನಂತೆಯೇ ಇದ್ದಿತು. ಅದರಲ್ಲಿ ಒಂದೆಡೆ ಮಾತ್ರ ಸ್ವಲ್ಪ ವಿಲಕ್ಷಣೆಯಿದ್ದಿತು.

ಈ ಹೊಸ ಮೃತ್ಯುಪತ್ರದಲ್ಲಿ ಆರ್ಕಮನ್ನನು ಮೊಟ್ಟಮೊದಲು ತನ್ನ ಹಿಂದಿನ ನಂಬುಗೆಯ ಉದ್ಯೋಗಸ್ಥರಿಬ್ಬರಿಗೆ ಒಂದಿಷ್ಟು ಪುರಸ್ಕಾರದ ವ್ಯವಸ್ಥೆ ಮಾಡಿದ್ದನು. ಮುಂದೆ ಅದರಲ್ಲಿ ಅವನ ಮಗ ಪೋಲನು ಜರ್ಮನ್ ಸರಕಾರದ ಪ್ರಜೆಯಾಗಿರಲೊಪ್ಪಿದರೆ ಮಾತ್ರ ತನ್ನ ತಂದೆಯ ಸಂಪತ್ತಿಗೆ ಅಧಿಕಾರಿಯಾಗಬಲ್ಲನೆಂದೂ, ಹಾಗಿಲ್ಲದೆ ಅವನು ಆಂಗ್ಲ ಸರಕಾರದ ಪ್ರಜೆಯಾಗಲೆಳಸಿದಲ್ಲಿ ಮೇಲೆ ಹೇಳಿದ ಸಂಪತ್ತಿಗಾತನು ವಂಚಿತನಾಗಬೇಕಾಗುವುದೆಂದೂ, ಅಂತಹ ಸಂದರ್ಭದಲ್ಲಿ ಎಲ್ಲ ಸಂಪತ್ತೂ ಆರ್ಕಮನ್ನನ ಅಳಿಯನಾದ ಓಟೋ ಹಿಲ್ಬರ್ಸನಿಗೆ ಕೊಡಲ್ಪಡುವುದೆಂದೂ ಬರೆಯಲಾಗಿದ್ದಿತು. ಹಿಲ್ಬರ್ಸನು ಜರ್ಮನ್ ಸೇನೆಯಲ್ಲಿ ನೌಕರಿ ಮಾಡುತ್ತಿದ್ದನು. ಮೊದಲಿನ ಉಯಿಲಿನಲ್ಲಿ ವೃದ್ಧನು ಆತನನ್ನೇ ತನ್ನ ಸಂಪೂರ್ಣ ಸಂಪತ್ತಿನ ಉತ್ತರಾಧಿಕಾರಿಯೆಂದು ನಿರ್ಣಯಿಸಿದ್ದನು.

ಉಯಿಲು ಬರೆದು ಮುಗಿಯಿತು. ಅರ್ಲಮನ್ನನು ಅದರ ಮೇಲೆ ಹಸ್ತಾಕ್ಷರ ಮಾಡಿದನು. ಈ ಕೆಲಸ ಪೂರೈಸುವುದರೊಳಗೆ ಡಾ. ಬ್ರಾಡಿಯು ಅಲ್ಲಿಗೆ ಬಂದಿದ್ದನು. ಬ್ಲೇಕನೂ ಡಾ. ಬ್ರಾಡಿಯೂ ಆ ಕಾಗದದ ಮೇಲೆ ಸಾಕ್ಷ್ಯ ಹಾಕಿದರು. ಇಷ್ಟಾದ ಬಳಿಕ ವೃದ್ಧಮಹಾಶಯನ ದೇಹಸ್ಥಿತಿಯು ಬದಲಾಯಿತು; ಅವನ ಉಸಿರು ಹೆಚ್ಚಿತು.

ಕೆಲ ನಿಮಿಷಗಳ ವರೆಗೆ ಸುಮ್ಮನಿದ್ದು, ಆ ಮೇಲೆ ಆ ವೃದ್ಧನು ಕ್ಷೀಣ ಸ್ವರದಲ್ಲಿ:—ಇಷ್ಟು ದಿನಗಳ ಮೇಲೆ ಈ ದಿನ ಅದೊಂದು ಮಹಾ ದುಶ್ಚಿಂತೆಯಿಂದ ಬಿಡುಗಡೆಯಾಯಿತು. ಗತ ರಾತ್ರಿಯ ದುರ್ಘಟನೆಯೊಂದಿಗೇ ನಾನು ಅಳಿದು ಹೋಗಿದ್ದರೆ, ಪೋಲನ ಮೇಲಾದ ಅವಿಚಾರಕ್ಕೆ ಪ್ರತೀಕಾರ ಮಾಡುತ್ತಿರಲಿಲ್ಲ. ಆ ವೇಳೆ ನಾನು ಸಾಯದಿದ್ದುದು ಸೌಭಾಗ್ಯವೇ ಸರಿ. ಮಹೋದಯ, ನಿಮ್ಮ ಹತ್ತಿರ ಇನ್ನೊಂದು ಪ್ರಾರ್ಥನೆ ಮಾಡುವೆ. ಈ ಉಯಿಲನ್ನು ನೀವು ಪೋಲನಿಗೆ ಕೊಡಬೇಕು. ತಟ್ಟನೆ ತಾನು ಪಿತೃಹೀನನಾದೆನೆಂದು ಪೋಲನು ತಿಳಿದುಕೊಳ್ಳುವನು. ಲಂಡನ್ನಿನ ಸೆಂಟ ಮೇರಿಅನ್ಸ ಎಂಬ ಸ್ಥಳದಲ್ಲಿ ನನ್ನ ಕಾರ್ಯಾಲಯದ ಶಾಖೆಯಿದೆ. ನಂ. ೧೭ ಅಂಶ್ಲೋ ಸ್ಕ್ವಾಯರಿನಲ್ಲಿ ಪೋಲನಿರುವನು. ಈ ಸಮಯದಲ್ಲಿ ಆತನ ಭೇಟಿಯಾಗಿದ್ದರೆ ಅವನಿಗೆ ನಾನೆರಡು ಉಪದೇಶ ಮಾಡುತ್ತಿದ್ದೆ. ಬಳಿಕ ನಾನು ನಿಶ್ಚಿಂತನಾಗುತ್ತಿದ್ದೆ; ಆದರೆ ಅದು ಅಸಂಭವ. ವೃದ್ಧನ ಕಣ್ಣುಗಳಿಂದ ಟಟಟಟನೆ ನೀರು ಉದುರಿತು.

ಬ್ಲೇಕನಂದನು—ನಿಮ್ಮ ಮರಣ ಶಾಸನವನ್ನು ನನ್ನ ಕೈಯಿಂದಲೇ ನಿಮ್ಮ ಪುತ್ರನಿಗೆ ಕೊಡುವೆನು. ಆತನಿಗೆ ಏನಾದರೂ ಹೇಳುವದಿದ್ದರೆ ಸಂಕೋಚವಿಲ್ಲದೆ ನೀವದನ್ನು ನನ್ನ ಹತ್ತಿರ ಹೇಳಬಹುದು; ನಾನದನ್ನು ಅವನಿಗೆ ತಿಳಿಸುವೆನು. ನಿಮ್ಮ ಪುತ್ರನ ವ್ಯವಹಾರದಿಂದ ನೀವು ಅತ್ಯಂತ ಮರ್ಮಾಹತರಾಗಿರುತ್ತೀರೆಂದು ಕಾಣುತ್ತದೆ. ಅವನು ನಿಮ್ಮ ಉಯಿಲನ್ನು ಸ್ವೀಕರಿಸುವದಿಲ್ಲೆಂದು ನೀವೆಣಿಸುತ್ತಿರುವಿರೇನು?

ವೃದ್ಧ—ಇಲ್ಲ; ಅಂತಹ ಆಶಂಕೆ ಇಲ್ಲ. ಅಂತಹ ಸಂಶಯವಿರುತ್ತಿದ್ದರೆ ನಾನು ಬೇರೆ ಉಯಿಲನ್ನು ಎಷ್ಟಕ್ಕೂ ಬರೆಯುತ್ತಿರಲಿಲ್ಲ.

ವಿಷಯವಿಷ್ಟೆ, ನನ್ನ ಮಗನು ವಿವಾಹ ಮಾಡಿಕೊಂಡಿರುವನು. ವ್ಯಾಪ ಯಿಕ ಕೆಲಸಗಳಲ್ಲಿಯೂ ಅವನಿಗೆ ಅನುಮಾನವಿದೆ. ಇಂತಹ ಸ್ಥಿತಿಯಲ್ಲಿ ಅವನು ನನ್ನ ಅಭಿಪ್ರಾಯಕ್ಕೆ ವಿರುದ್ಧವಾಗಿ, ನನ್ನ ಸಂಪತ್ತನ್ನು ಧಿಃಕ ರಿಸಿ, ದಾರಿದ್ರ್ಯವನ್ನು ಭೋಗಿಸಿಯಾನೆಂದು ನನಗೆ ನಂಬುಗೆಯಿಲ್ಲ. ತಾವು ಈ ಅಂತಿಮ ವೇಳೆಯಲ್ಲಿ ನನಗೆ ಮಾಡಿದ ಉಪಕಾರದಿಂದ ನಾನು ನನ್ನ ಮಾನಸಿಕ ದುಃಖವನ್ನು ತಮಗೆ ಬಿಚ್ಚಿ ಹೇಳುವುದೇ ಕರ್ತವ್ಯವೆಂದು ನಾನು ತಿಳಿಯುತ್ತೇನೆ.

ಬ್ಲೇಕ—ಹೇಳೋಣಾಗಲಿ. ಅದನ್ನು ಕೇಳಲು ನಾನೂ ಉತ್ಸುಕ ನಾಗಿರುವೆನು.

ವೃದ್ಧ—ಆಗಲಿ, ಕೇಳಿರಿ. ನನ್ನ ಮಾತೆಲ್ಲವನ್ನೂ ಕೇಳಿದ ಮೇಲೆ ನಾನು ಮೊದಲನೆಯ ಉಯಿಲಿನಲ್ಲಿ ನನ್ನ ಒಬ್ಬನೇ ಒಬ್ಬ ಮಗನನ್ನು ಪೈತ್ರ್ಯಕ ಸಂಪತ್ತಿನಿಂದೇಕೆ ವಂಚಿತಗೊಳಿಸಿದ್ದೆನೆಂದೂ ಆ ಮೇಲೆ ಈ ಹೊಸ ಉಯಿಲಿನಲ್ಲಿ ಅದೇಕೆ ಹೊಸದೊಂದು ಮಾತನ್ನು ಜೋಡಿಸಿದೆ ನೆಂದೂ ನಿಮಗೆ ಗೊತ್ತಾಗುವುದು. ನಾನಾದರೋ ಜರ್ಮನ್ನನಾಗಿದ್ದೆ; ಆದರೆ ನನ್ನ ಪತ್ನಿಯು ಓರ್ವ ಮಾನ್ಯ ವಂಶದ ಆಂಗ್ಲ ಕನ್ಯೆಯಿದ್ದಳು. ಆ ಸಮಯದಲ್ಲಿ ನನ್ನ ಹೆಂಡತಿಯು ವಿಶೇಷಾಗ್ರಹದಿಂದ ಪೋಲನನ್ನು ಕೆಲಸ-ಕಾರ್ಯ ಕಲಿಯುವ ಸಲುವಾಗಿ ಇಂಗ್ಲಂಡಕ್ಕೆ ಕಳುಹಿಸಿದ್ದೆನು. ಅಲ್ಲಿ ಆರೇಳು ವರ್ಷವಿದ್ದ ದೆಸೆಯಿಂದ ಪೋಲನು ತೀರ ಆಂಗ್ಲನಾಗಿ ಹೋಗಿದ್ದನು. ಅವನ ಆಚಾರ-ವ್ಯವಹಾರವೂ ಭಾವ-ಭಂಗಿಯೂ ಎಲ್ಲವೂ ಆಂಗ್ಲರಂತಾಗಿ ಹೋಗಿದ್ದಿತು ಅವನು ಇಂಗ್ಲಂಡದ ಪಕ್ಷ ಪಾತಿಯೂ ಆಗಿಹೋಗಿದ್ದನು. ಬಳಿಕ ಪೋಲನು ಇಂಗ್ಲಂಡದಿಂದ ಬರ್ಲಿನ್ನಕ್ಕೆ ಬಂದು ಕೆಲಸ-ಕಾರ್ಯಗಳನ್ನು ನೋಡತೊಡಗಿದನು. ಇದಾದ ಹಲವು ತಿಂಗಳ ತರುವಾಯ ನನ್ನ ಹೆಂಡತಿಯು ಸ್ವರ್ಗಸ್ಥ ಳಾದಳು. ತಾಯಿಯ ಮರಣದ ನಂತರ ಪೋಲನು ತಿರುಗಿ ಇಂಗ್ಲಂ ಡಕ್ಕೆ ತೆರಳಿದನು. ನಾನು ಲಂಡನ್ನಿನಲ್ಲೊಂದು ಶಾಖೆ ತೆರೆದು, ಅಲ್ಲಿಯ ಕಾರ್ಯಭಾರವನ್ನು ಪೋಲನಿಗೊಪ್ಪಿಸಿದೆನು. ಇದು ಸುಮಾರು ಐದು ವರ್ಷದ ಹಿಂದಿನ ಮಾತು. ಲಂಡನ್ನಿನಲ್ಲಿಯೇ ಪೋಲನು ಓರ್ವ ಪ್ರತಿ ಷ್ಠಿತ ಸುಂದರ ಯುವತಿಯೊಂದಿಗೆ ಮದುವೆಯಾದನು. ಈ ಐದು

ವರ್ಷಗಳಲ್ಲಿ ಒಮ್ಮೆಯೂ ಸ್ವದೇಶಕ್ಕೆ ಬರಲು ಪೋಲನಿಗೆ ಅವಕಾಶ ದೊರೆಯಲಿಲ್ಲ. ಆದುದರಿಂದ ಆತನನ್ನು ನೋಡುವುದಕ್ಕಾಗಿಯೂ ಇಲ್ಲಿ ಆತನು ಹೇಗೆ ಕೆಲಸ ನಡೆಸಿಕೊಂಡು ಬರುತ್ತಿದ್ದಾನೆಂಬುದನ್ನು ಪರೀಕ್ಷಿಸುವುದಕ್ಕಾಗಿಯೂ ನಾನೇ ಲಂಡನಕ್ಕೆ ಆಗಾಗ್ಗೆ ಬಂದು ಹೋಗುತ್ತಿದ್ದೆ. ಅವನನ್ನು ಒಂದೆರಡು ತಿಂಗಳು ನೋಡದಿದ್ದ ಕೂಡಲೆ ನಾನು ಕಳವಳಿಸುತ್ತಿದ್ದೆ. ಕಳೆದ ಬಾರಿ ನಾನು ಪೋಲನನ್ನು ಕಾಣಬಂದಿದ್ದಾಗ, ಅವನು ತಾನು ಸ್ವದೇಶದಿಂದ ಎಲ್ಲ ವಿಧದ ಸಂಬಂಧವನ್ನು ತೊರೆದು ಬ್ರಿಟಿಶ ಪ್ರಜೆಯಾಗಲು ನಿಶ್ಚಯಿಸಿರುವೆನೆಂದೂ, ತನ್ನೀ ಸಂಕಲ್ಪವನ್ನು ಶೀಘ್ರದಲ್ಲಿಯೇ ಈಡೇರಿಸುವೆನೆಂದೂ ತಿಳಿಸಿದ್ದನು.

ಬ್ಲೇಕ ಕೇಳಿದ—ಅವನ ಈ ಪ್ರಸ್ತಾಪ ನಿಮಗೆ ಸಮ್ಮತವಿರಲಿಲ್ಲವೆ?

ವೃದ್ಧ—ಈ ಮಾತನ್ನು ಕೇಳುವ ಅವಶ್ಯಕತೆಯಿದೆಯೇ? ಪೋಲನ ನುಡಿಗಳನ್ನು ಕೇಳಿ ನಾನು ಬಹಳ ಮರ್ಮಾಹತನಾದೆ. ನನ್ನ ಮಗನ ಹೃದಯದಲ್ಲಿಂತಹ ಅನುಚಿತ ಸಂಕಲ್ಪಕ್ಕೆ ಎಡೆ ಸಿಕ್ಕೀತೆಂದು ನಾನು ಕಲ್ಪಿಸಿಯೂ ಇರಲಿಲ್ಲ. ಇದು ಪೋಲನ ಆಂತರಿಕ ವಿಶ್ವಾಸವೆಂದು ಈಗಲೂ ಪೂರ್ಣ ವಿಶ್ವಾಸವಾಗುವುದಿಲ್ಲ. ಆಂಗ್ಲಜಾತಿಯ ಮೇಲೆ ನನಗೆ ಯಥೇಷ್ಟ ಶ್ರದ್ಧೆಯಿದೆ. ನಿಮ್ಮ ದೇಶದ ಮೇಲೂ ನನಗೆ ಪ್ರೀತಿಯು ಕಡಿಮೆಯಿಲ್ಲ; ಆದರೆ ನನ್ನ ವಂಶದವನೊಬ್ಬನು ಸ್ವದೇಶದ ಸಂಬಂಧಗಳನ್ನೆಲ್ಲ ಕಡಿದು ಹಾಕಿ, ವಿದೇಶವನ್ನು ಮಾತೃಭೂಮಿಯಾಗಿ ತಿಳಿಯತೊಡಗುವನೆಂಬುದು ನನಗೆ ಅಸಹ್ಯವೆನಿಸಿತು. ನಾನು ನನ್ನ ಮಾತೃಭೂಮಿಯ ಅಯೋಗ್ಯ ಸಂತಾನವಾದಾಗ್ಯೂ ಜನನೀ ಜನ್ಮಭೂಮಿಯನ್ನು ನಾನು ಪ್ರಾಣಕ್ಕಿಂತಲೂ ಮಿಗಿಲಾಗಿ ಪ್ರೀತಿಸುತ್ತೇನೆ. ಸ್ವದೇಶದ ಗೌರವದಿಂದಲೇ ನಾನು ಗೌರವಾನ್ವಿತನಾಗುವೆನೆಂದೂ ಕೃತಾರ್ಥನಾಗುವೆನೆಂದೂ ತಿಳಿಯುತ್ತೇನೆ. ಸ್ವದೇಶದ ಮೇಲೆ ಪೋಲನಿಗೂ ಇದೇ ಅನುರಾಗವಿತ್ತೆಂದು ನನ್ನ ಭಾವನೆ ಇದ್ದಿತು; ಆದರೆ ಪೋಲನ ದುರ್ಗತಿಯ ಕುರುಹನ್ನು ಕಂಡು ನಾನು ಅತ್ಯಂತ ವಿಸ್ಮಯನೂ ವ್ಯಥಿತನೂ ಆದೆನು; ಆದರೆ ಯೋಚಿಸಿ ನೋಡಿದರೆ, ಅವನ ಮಟ್ಟಿಗಿದು ತೀರ ಸ್ವಾಭಾವಿಕವಾದುದೇ ಸರಿ. ಕಾರಣವೇನಂದರೆ, ಅವನ ತಾಯಿಯು ಆಂಗ್ಲ ಸ್ತ್ರೀ; ಅವನೂ ಸಹ ಆಂಗ್ಲ ಬಾಲಿಕೆಯನ್ನು ಮದುವೆಯಾಗಿರು

ವನು; ಬಹು ಕಾಲದವರೆಗೆ ಇಂಗ್ಲಂಡಿನಲ್ಲಿಯೇ ಇವನ ಪಾಲನೆ-ಪೋಷಣೆ ನಡೆದಿದೆ. ಇದೇ ದೇಶದಲ್ಲವನಿಗೆ ಶಿಕ್ಷಣವೂ ದೊರೆತಿದೆ. ಪೋಲನು ನನಗೆ ಮೇಲೆ ಹೇಳಿದ ಅಭಿಪ್ರಾಯವನ್ನರುಹಿದಾಗ, ನಾನಾತನಿಗೆ ಕೋಮಲ ಶಬ್ದಗಳಲ್ಲಿ ಬುದ್ಧಿ ಹೇಳಿದೆ:—ತಾಯ್ತಂದೆಗಳನ್ನು ತಾಯ್ತಂದೆ ಗಳೆಂದು ಅಂಗೀಕರಿಸದಿರುವುದು ಯಾವ ರೀತಿ ಅಪರಾಧವೋ, ಅದ ರಂತೆಯೇ ಸ್ವದೇಶವನ್ನು ಸ್ವದೇಶವೆಂದು ಕರೆಯದಿರುವುದೂ ಅಪರಾ ಧವೇ ಸರಿ. ಯಾವನಲ್ಲಿ ಸ್ವದೇಶದ ಮೇಲೆ ಪ್ರೇಮವಿಲ್ಲವೋ, ಮಾತೃ ಭೂಮಿಯನ್ನಾವನು ಮಾತೃಭೂಮಿಯೆಂದು ಮನ್ನಿಸಲೆಳಿಸುವುದಿಲ್ಲವೋ ಅವನು ನಿಜವಾಗಿಯೂ ನರಾಧಮನು; ಆದರೆ ಪೋಲನು ತನ್ನ ಸಂಕಲ್ಪ ವನ್ನು ತ್ಯಜಿಸಲೊಪ್ಪಲಿಲ್ಲ. ಆಗ ನನಗೆ ತುಂಬಾ ಸಿಟ್ಟು ಬಂದಿತು. ನೀನು ನಿನ್ನ ಈ ಸಂಕಲ್ಪವನ್ನು ಬಿಡುವುದಿಲ್ಲವಾದರೆ ನನ್ನ ಸಮಸ್ತ ಸಂಪತ್ತಿನ ಆಶೆಯನ್ನು ಬಿಡಬೇಕಾಗುವುದು, ಎಂದು ಹೇಳಿದೆ. ಇದ ರಿಂದಲೂ ಅವನು ವಿಚಲಿತನಾಗದೆ ಹುರುಪಿನಿಂದ, 'ನಿಮ್ಮ ಇಚ್ಛೆ ಬಂದಂತೆ ಮಾಡಬಹುದು. ನಿಮ್ಮ ಸಂಪತ್ತಿನ ಲೋಭದಿಂದ ನಾನು ನನ್ನ ಸಂಕಲ್ಪವನ್ನು ಬಿಡಲಾರೆ' ಎಂದುಬಿಟ್ಟನು. ಆದರಿಂದ ನಾನು ನಿರಾಶನಾದೆ. ಆ ಮೇಲೆ ನನ್ನ ಹಾಗು ಅವನ ಮನಸ್ಸು ಕೂಡಿ ಬರ ಲಿಲ್ಲ. ಅವನಿಗೆ ಭಯತೋರಿಸಿದುದು ಒಳಿತಾಗಲಿಲ್ಲೆಂದು ಈಗ ನಾನು ಯೋಚಿಸುತ್ತಿದ್ದೇನೆ. ಸ್ನೇಹವ್ಯವಹಾರವನ್ನೇ ಬಳಸಿದ್ದರೆ ಸಫಲತೆ ಸಿಗುವ ಸಂಭವವಿದ್ದಿತು.

ಬ್ಲೇಕ—ಇಂದಿನ ವರೆಗೂ ನಿಮ್ಮಗಳ ಮನೋಮಾಲಿನ್ಯವು ದೂರಾ ಗಿರಲಿಲ್ಲವೆ?

ವೃದ್ಧ—ಇಲ್ಲ. ಬರ್ಲಿನ್ನಕ್ಕೆ ಹೋದೊಡನೆ ನಾನು ನನ್ನ ಅಳಿಯನ ಹೆಸರಿಗೊಂದು ಉಯಿಲನ್ನು ಬರೆದು ಬಿಟ್ಟೆನು. ನನ್ನಳಿಯ ಹಿಲ್ಡರ್ಸನು ಜರ್ಮನ್ ಸೈನ್ಯಪಡೆಯಲ್ಲಿ ಲೆಫ್ಟನೆಂಟನಾಗಿರುವನು.

ಬ್ಲೇಕ—ಆದರೆ ಇಂದು ನೀವು ಬರೆಯಿಸಿದ ಹೊಸ ಉಯಿಲಿನಲ್ಲಿ ಹಿಲ್ಡರ್ಸನಿಗೆ ಯಾವ ವ್ಯವಸ್ಥೆಯನ್ನೂ ಮಾಡಲಿಲ್ಲ. ಒಂದು ಉಯಿಲಿನಲ್ಲಿ ಸಮಸ್ತೈಶ್ವರ್ಯದ ಸರ್ವಾಧಿಕಾರಿಯಾಗಿ ಮಾಡಲ್ಪಟ್ಟಿರುವವನಿಗೆ ಎರಡನೆ ಯದರಲ್ಲಿ ಏನನ್ನೂ ಬಿಡಲಿಲ್ಲವಲ್ಲಾ!

ವೃದ್ಧ:—ಹೌದು, ಅವನಿಗೇನೂ ಬಿಡಲಿಲ್ಲ. ಸತ್ಯ ಸಂಗತಿಯೇನೆಂದರೆ, ಅಳಿಯನ ಮೇಲೆ ನನಗೆ ಎಳ್ಳಷ್ಟೂ ಸ್ನೇಹವಿಲ್ಲ; ಅವನು ನನ್ನ ಸ್ನೇಹಕ್ಕೆ ಯೋಗ್ಯವಾದ ಪಾತ್ರನೂ ಅಲ್ಲ. ನಾನೇನೋ ನನ್ನ ಮಗನ ಮೇಲೆ ಸಿಟ್ಟಾದ ಕಾರಣ ಅವನ ಹೆಸರಿಗೆ ಉಯಿಲನ್ನು ಬರೆದಿದ್ದೆನಷ್ಟೇ. ಹಿಂದಿನಿಂದ ಹಿಲ್ಬರ್ಸನು ಬಹು ದುಶ್ಚರಿತ್ರನೆಂದೂ, ಮಾನವನ ಅದಾವ ಸದ್ಗುಣವೂ ಅವನಲ್ಲಿಲ್ಲವೆಂದೂ, ಹದಿನಾರಾಣೆ ಪಶುವೆಂದೂ ವಿಶ್ವಸ್ತ ಸೂತ್ರದಿಂದ ತಿಳಿದುಬಂದಿತು. ಅವನ ಚರಿತ್ರದ ಸುದ್ದಿ ಕೇಳಿ ಎರಡನೆಯ ಉಯಿಲು ಬರೆಯದೆ ಕೆಲಸ ಸಾಗದೆಂದು ನಾನು ನಿರ್ಧರಿಸಿದ್ದೆ. ಬಹಳ ತಲೆ ಖರ್ಚು ಮಾಡಿದ ಮೇಲೆ, ಒಂದು ಸಲ ಪುನಃ ಮೃದು ನುಡಿಗಳಲ್ಲಿ ಪೋಲನನ್ನು ಸಮಾಧಾನ ಪಡಿಸುವ ಉದ್ದೇಶದಿಂದ ನಾನು ಇಂಗ್ಲಂಡಕ್ಕೆ ಬಂದಿದ್ದೆನು. ಲಂಡನಕ್ಕೆ ಹೋದಾಗ ಅವನು ತನ್ನ ಪತ್ನಿಯೊಂದಿಗೆ ಎಲ್ಲಿಗೋ ಹೋಗಿ ಬಹಳ ದಿನಗಳಾದವೆಂದು ಕೇಳಿದೆ. ಅಲ್ಲಿ ನಿಲ್ಲದೆ, ನನ್ನೊಬ್ಬ ಚಿಕ್ಕಂದಿನ ಮಿತ್ರನನ್ನು ಕಾಣುವ ಸಲುವಾಗಿ ನಾನು ಎಡಿನ್‌ಬರೋದ ಕಡೆಗೆ ಹೊರಟೆ. ಇದೇ ನನ್ನ ಮಹಾ ಪ್ರಯಾಣವಾದೀತೆಂದು ತಿಳಿದಿರಲಿಲ್ಲ. ಏನೇ ಆಗಲಿ, ಮರಣಕ್ಕಾಗಿ ನಾನು ಪೂರ್ಣ ರೀತಿಯಿಂದ ಸಿದ್ಧನಾಗಿರುವೆನು; ಆದರೆ ಸಾಯುವ ಸಮಯದಲ್ಲಿ ಪೋಲನ ದರ್ಶನವಾಗಲಿಲ್ಲವೆಂಬುದೊಂದು ಬಯಕೆ ಮಾತ್ರ ಉಳಿಯಿತು. ಅವನ ಮೇಲೆ ನಾನು ಕಠೋರ ರೀತಿಯಲ್ಲಿ ವರ್ತಿಸಿದುದರಿಂದ ಮೃತ್ಯು ಕಾಲದಲ್ಲಿ ಅನುತಪ್ತನಾಗಿರಬೇಕಾಯಿತು. ಇದನ್ನು ಕೇಳಿದಲ್ಲಿ ಪೋಲನು ನನ್ನ ಅನುರೋಧವನ್ನು ಉಪೇಕ್ಷಿಸಲಿಕ್ಕಿಲ್ಲ. ತಾವು ನನಗೀ ಉಪಕಾರವನ್ನು ಮಾಡುವಿರೇನು?

ಬ್ಲೇಕ— ಹೂಂ, ಅವಶ್ಯವಾಗಿ ಮಾಡುವೆನು. ನೀವು ಕ್ಷೋಭೆಯನ್ನು ಬಿಟ್ಟುಬಿಡಿರಿ.

ವೃದ್ಧ—ಧನ್ಯವಾದ ಮಹಾಶಯ! ನೀವು ಪರಮ ಮಿತ್ರನ ಕೆಲಸ ಮಾಡಿದಿರಿ. ನಾನು ಬರೆಯಿಸಿದ ಹೊಸ ಮೃತ್ಯುಪತ್ರವನ್ನು ನೀವು ಸಮರ್ಥಿಸುತ್ತೀರಲ್ಲವೆ?

ಈ ಮಾತನ್ನು ನುಡಿದು ವೃದ್ಧನು ಬ್ಲೇಕನ ಮೊಗವನ್ನೀಕ್ಷಿಸ ತೊಡಗಿದನು. ಡಾಕ್ಟರನ ಮದ್ದಿನಿಂದ ಮರಣಾಹತನಾದ ವೃದ್ಧನ ಅಂತ

ರಿಂದ್ರಿಯುಲ್ಲಾ ವಿರ್ಭವಿಸಿದ್ದ ಉತ್ತೇಜನೆಗೆ ಪ್ರತಿಕ್ರಿಯೆಯು ಆರಂಭ ವಾದುದನ್ನು ಬ್ಲೇಕನು ಕಂಡುಕೊಂಡನು. ಆಗ ಬ್ಲೇಕನು—ನಿಮ್ಮ ಸಂಪತ್ತನ್ನು ನೀವು ಯಾರಿಗೆ ಬೇಕಾದರೂ ಕೊಡಬಹುದು. ಈ ಸಂಬಂಧ ದಲ್ಲಿ ನನ್ನ ಮತವನ್ನು ನೀವು ಪ್ರಕಟಿಸುವದು ಅನುಚಿತವು. ಆದಾಗ್ಯೂ ನನ್ನ ಮತವನ್ನು ನೀವು ತಿಳಿಯಬಯಸುವದಾದರೆ, ಅದನ್ನು ಹೇಳಲು ನನ್ನದೇನೂ ಆಕ್ಷೇಪವಿಲ್ಲ. ನಿಮ್ಮಲ್ಲಿರುವ ಸ್ವದೇಶ ಹಾಗು ಸ್ವಜಾತಿ ಪ್ರೇಮವು ಪ್ರಶಂಸನೀಯವಾದುದೆಂಬುವನ್ನು ನಾನು ಮನಃಪೂರ್ವಕವಾಗಿ ಒಪ್ಪಿಕೊಳ್ಳುವೆನು; ಆದರೆ ನಿಮ್ಮ ಮಗನು ಸುಶಿಕ್ಷಿತನು; ಹಾಗು ತರುಣನು. ಅವನ ವ್ಯಕ್ತಿಗತವಾದ ಮತಾಮತಗಳ ಸ್ವಾಧೀನತೆಯಲ್ಲಿ ಕೈ ಹಾಕುವು ದೆಂದರೆ, ನಿಮ್ಮದಿದು ಅನಧಿಕಾರ ಚರ್ಚೆಯೇ ಸರಿ. ನನ್ನ ವಿಚಾರದಲ್ಲಿ ಆದಾವ ಸಹೃದಯ ಮನುಷ್ಯನೂ ತಮ್ಮ ಭಾವವನ್ನು ಸಮರ್ಥಿಸ ಲಾರನು. ಬಲಪ್ರಯೋಗ ಮಾಡಿ ಯಾರೂ ಯಾರನ್ನೂ ಸ್ವದೇಶಭಕ್ತ ರನ್ನಾಗಿ ಮಾಡಲಾರರು. ಶಾಂತ ಮನಸ್ಸಿನಿಂದ ನನ್ನ ಮಾತಿನ ಬಗ್ಗೆ ವಿಚಾರ ಗೆಯ್ದು, ತಾವು ತಮ್ಮ ಉಯಿಲನ್ನು ಬದಲಿಸುವುದಾದರೆ ನನಗೆ ಸಂತೋಷವಾದೀತು.

ಅರ್ಕಮನ್ನನು ಕೆಲ ಹೊತ್ತಿನ ವರೆಗ ಚಿಂತಿಸಿ, ಆ ಮೇಲೆ:— ನೀವು ಯಥಾರ್ಥ ನುಡಿಯನ್ನಾಡಿದಿರಿ. ಉಯಿಲಿನಲ್ಲಿ ಈ ವಿಷಯವನ್ನು ಲ್ಲೇಖಿಸದಿರುವುದೇ ಒಳ್ಳೆಯದಿದ್ದಿತು. ಉಯಿಲು ತುಂಬಾ ದುಡುಕಿನಲ್ಲಿ ಬರೆಯಲ್ಪಟ್ಟಿತು.

ಬ್ಲೇಕ—ಈಗಲೂ ಸಮಯವಿದೆ. ನೀವೆಳಸುವುದಾದರೆ ಈಗಲೂ ಆ ಮಾತನ್ನು ತೆಗೆದು ಹಾಕಲಿಕ್ಕಾಗುವುದು. ನಿಮ್ಮ ಹಾಗು ನಿಮ್ಮ ಪುತ್ರನ ರುಚಿಯು ಒಂದೇ ತೆರನಾಗಿರುವುದೆಂದಾಶಿಸುವುದು ಅನೇಕ ಕಾರಣ ಗಳಿಂದ ಅಸಂಗತವೇ ಸರಿ. ನಿಮ್ಮ ಮಗನು ಆಂಗ್ಲ ಕನ್ಯೆಯನ್ನು ವರಿ ಸಿರುವನೆಂದೂ ಅವನ ತಾಯಿಯೂ ಆಂಗ್ಲ ಯುವತಿಯೇ ಆಗಿದ್ದಳೆಂದೂ ನೀವೇ ಹೇಳುವಿರಿ; ಇದಲ್ಲದೆ ಅವನ ಶಿಕ್ಷಾ-ದೀಕ್ಷೆಗಳೂ ಇಂಗ್ಲಂಡದ ಲ್ಲಿಯೇ ನಡೆದಿವೆ. ಹೀಗಿರುವಾಗ, ಅವನು ಆಂಗ್ಲಪಕ್ಷಪಾತಿಯಾಗುವುದು ಸ್ವಾಭಾವಿಕವಲ್ಲವೆ?

ಅರ್ಕಮನ್ನ—ತೀರ ಸತ್ಯ.

ಬ್ಲೇಕ— ಇಂಗ್ಲೆಂಡದಲ್ಲವನು ನಿಮ್ಮ ವಹಿವಾಟಿಯನ್ನು ನೋಡಿ ಕೊಳ್ಳುತ್ತಿರುವನು. ಸಂಭವತಃ ತನ್ನ ಬಾಳ್ವೆಯ ಅಧಿಕ ಭಾಗವನ್ನು ಆತನು ಇಂಗ್ಲಂಡದಲ್ಲಿಯೇ ಕಳೆಯಬೇಕಾದೀತು. ಇಂತಹ ಸ್ಥಿತಿಯಲ್ಲಿ ಅವನು ಬ್ರಿಟಿಶ ಪ್ರಜೆಯ ಸಂಪೂರ್ಣಾಧಿಕಾರವನ್ನು ಹೊಂದಬಲ್ಲನಾದರೆ, ಮುಂದವನ ವ್ಯಾಪಾರಕ್ಕೆ ಯಥೇಷ್ಟ ಅನುಕೂಲ ದೊರೆಯುವ ಸಂಭವವಿದೆ.

ಆರ್ಗಮನ್ನ—ಮಹಾನುಭಾವ! ನೀವು ಹೇಳಿದುದು ಸರಿ. ಇದರ ಮೇಲೆ ಮೊದಲೆಂದೂ ನಾನು ಮನಸ್ಸು ಕೊಟ್ಟಿರಲಿಲ್ಲ. ನಾನು ಸತ್ತ ಬಳಿಕ ಪೋಲನೇನು ಮಾಡುವನು, ಏನು ಮಾಡುವುದಿಲ್ಲ ಎಂಬುದನ್ನು ನೋಡಲು ನಾನು ಬರುವುದಿಲ್ಲ. ನನ್ನ ದುರ್ವ್ಯವಹಾರದಿಂದಾಗಿ ಅವನು ಆಜೀವ ಕಷ್ಟ ಭೋಗಿಸುವುದಾದರೆ ಇದು ನನಗೆ ಅಸಹ್ಯವೇ ಸರಿ. ಇಲ್ಲ, ನಾನವನ ಸ್ವತಂತ್ರೇಚ್ಛೆಗೆ ವಿಘ್ನತಂದೊಡ್ಡುವುದಿಲ್ಲ. ನಾನೀ ಉಯಿಲನ್ನು ರದ್ದುಗೊಳಿಸುವೆನು. ನೀವು ಹೊಸದೊಂದು ಉಯಿಲನ್ನು ಬರೆದು ಸಿದ್ಧಗೊಳಿಸಿರಿ. ಈಗ ನೀವೀ ಕೆಲಸದಲ್ಲಿ ಸ್ವಲ್ಪವೂ ವಿಲಂಬಿಸುವುದು ಬೇಡ. ಹಾಗಾದಲ್ಲಿ ಅದರ ಮೇಲೆ ಹಸ್ತಾಕ್ಷರ ಹಾಕುವ ಮೊದಲು ನನ್ನ ಪ್ರಾಣಪಕ್ಷಿಯು ಹಾರಿಹೋದೀತು. ಇನ್ನು ನಾನು ಹತ್ತು ಮಿನೀಟು ಬದುಕುವೆನೋ ಇಲ್ಲವೋ........

ವೃದ್ಧನ ಮಾತು ಪೂರ್ಣವಾಗಲಿಲ್ಲ. ಅವನ ಉಸಿರು ಗರಗರವೆನ್ನ ತೊಡಗಿತು. ಆತ ಏನೋ ಹೇಳಬೇಕೆಂದಿದ್ದನು; ಆದರೆ ಶಬ್ದ ಹೊರಡಲಿಲ್ಲ. ಒಡನೆಯೇ ಡಾಕ್ಟರನು ನಾಡಿ, ಎದೆ ಪರೀಕ್ಷೆ ಮಾಡಿದನು. ತರುವಾಯ ಬ್ಲೇಕನನ್ನು ಕುರಿತು—ಬಡಪಾಯಿಯ ಅಂತಿಮ ಲಾಲಸೆಯು ನೆರವೇರ ಲಿಲ್ಲ; ಉಳಿದು ಹೋಯಿತು.

ಬ್ಲೇಕನು ಕ್ಷುಣ್ಣಭಾವದಿಂದ— ಏನು! ಸತ್ತುಹೋದರೆ? ಅಯ್ಯೋ! ಇನ್ನು ಕೆಲವೇ ನಿಮಿಷ ಬದುಕಿರುತ್ತಿದ್ದರೆ ಕೆಲಸವೆಲ್ಲ ಪೂರ್ಣಗೊಳ್ಳುತ್ತಿದ್ದಿತು. ಉಯಿಲನ್ನು ಬರೆಯುವ ಮೊದಲೇ ತರ್ಕವಿತರ್ಕ ಮಾಡಿ ನಾನವರಿಗೆ ಅವರ ಕೆಲಸದ ಅಯೌಕ್ತಿಕತೆಯನ್ನು ತಿಳಿಯಹೇಳಿದ್ದರೆ, ಉಯಿಲು ಪೋಲನಿಗನುಕೂಲವಾಗಿಯೇ ಬರೆಯಲ್ಪಡುತ್ತಿದ್ದಿತು. ಆಗಲಿ. ಇನ್ನವರ ದುಶ್ಚರಿತ್ರನಾದ ಅಳಿಯನು ಅವರ ಸಂಪತ್ತನ್ನು ಉಪಭೋಗಿಸಲಾರನು. ಇದೇ ಹರ್ಷದ ವಿಷಯ.

ಇನ್ನು ಮೃತಪುರುಷನ ಹತ್ತಿರ ಕುಳಿತಿರುವುದರಿಂದೇನೂ ಪ್ರಯೋಜನವಿಲ್ಲೆಂದು ಬಗೆದು, ಬ್ಲೇಕನು ತನ್ನ ಸಂಗಾತಿಯಾದ ಸ್ಮಿತ್ತನೊಂದಿಗೆ ಅಲ್ಲಿಂದ ಹೊರಬಿದ್ದನು.

ಡಾ. ಬ್ರಾಡಿಯೂ ಹೋಗಲಿಕ್ಕೆ ಸಿದ್ಧನಾಗಿ ಹೇಳಿದನು:—ಕಾರ್ನವೂರದಲ್ಲಿ ನನಗೂ ಹಲವು ರೋಗಿಗಳನ್ನು ನೋಡಲು ಹೋಗಬೇಕಾಗಿದೆ; ಅಲ್ಲದೆ ಯಾವನ ತಪ್ಪಿನಿಂದೀ ದುರ್ಘಟನೆಯಾಗಿದೆಯೋ, ಆ ಸಿಗ್ನಲ್ಲರನ ಸ್ಥಿತಿಯೂ ತುಂಬಾ ಶೋಚನೀಯವಾಗಿದೆ. ಅವನನ್ನೊಮ್ಮೆ ನೋಡಬೇಕಾಗಿದೆ. ಹಿಂದಿನ ರಾತ್ರಿ ವಿಪರೀತ ಜ್ವರ ಬಂದಿದ್ದರೂ ಅವನು ಕೆಲಸಕ್ಕೆ ಬಂದಿದ್ದನು; ಆದರಿಂದಲೇ ಈ ದುರ್ಘಟನೆ ನಡೆಯಿತು.

ಬ್ಲೇಕ—ನನಗವನ ನೆನಪೇ ಇರಲಿಲ್ಲ. ಆ ಮನುಷ್ಯನು ತೀರ ಬಡವನು. ಅವನ ಉಪಚಾರಕ್ಕೆ ಹೆಚ್ಚಾಗಿ ಹಣ ಖರ್ಚಾದೀತು. ರೇಲ್ವೇ ಕಂಪನಿಯು ಆ ಖರ್ಚನ್ನು ಕೊಡಲಿಕ್ಕೆ ಪ್ರಾಯಶಃ ಒಪ್ಪಲಾರದು. ಆದುದರಿಂದ ನೀವವನಿಗೆ ಔಷಧಿ ಕೊಡಲು ವಿಮುಖರಾಗಬಾರದು. ನಿಮ್ಮದೆಷ್ಟು ರೂಪಾಯಿಗಳ ಬಿಲ್ಲಾದರೂ ಅದನ್ನು ನನ್ನೆಡೆಗೆ ಕಳುಹಿಸಿರಿ. ನಾನದನ್ನು ಕೂಡಲೇ ತೀರಿಸುವೆನು.

ಡಾ. ಬ್ರಾಡಿ—ಹಾಗೆಯೇ ಮಾಡುವೆ. ತಮ್ಮಂತೆ ಬಡವರ ಮೇಲೆ ದಯೆದೋರುವವರು ಲೋಕದಲ್ಲಿ ವಿರಳ.

ಡಾ. ಬ್ರಾಡಿಯೂ ಬ್ಲೇಕನೂ ಅಲ್ಲಿಂದ ಹೊರಬಿದ್ದು ಬೇರೆ ಬೇರೆ ದಾರಿ ಹಿಡಿದರು. ಅರ್ಕಮನ್ನನ ಉಯಿಲು ಬ್ಲೇಕನ ಜೇಬಿನೊಳಗಿದ್ದಿತು.

ಪ್ರಾತಃಕಾಲದಲ್ಲಿ ಸುಟ್ಟು ಹೋದ ಎಕ್ಸಪ್ರೆಸ್ಸ ಟ್ರೇನಿನ ಬೂದಿಯು ಇರುಳಿನ ಶೋಚನೀಯ ದುರ್ಘಟನೆಯ ಕುರುಹನ್ನು ಸೂಚಿಸುತ್ತಿದ್ದಿತು.

ಹಾದಿ ನಡೆಯುತ್ತ ನಡೆಯುತ್ತ ಆ ಬೂದಿಯನ್ನು ಕಂಡು ಸ್ಮಿತ್ತನು:- ಓಫ್! ನಿನ್ನೆ ರಾತ್ರಿ ಅದೆಷ್ಟು ಭಯಾನಕವಿದ್ದಿತು? ಇಂತಹ ಹೃದಯ ವಿದಾರಕ ದೃಶ್ಯವನ್ನು ಬಾಳಿನಲ್ಲೆಂದೂ ಮರೆಯೆನು.

ಬ್ಲೇಕ— ನಿಜ ನಿಜ. ಇಂದು ಅದೆಷ್ಟು ಕುಟುಂಬಗಳಲ್ಲಿ ಶೋಕದ ಗೋಳಾಟವು ಕೇಳಿಸುವುದೋ! ಇದನ್ನಾಲೋಚಿಸಿದರೆ ಎದೆಯಲ್ಲಿ ನಡುಗು ಹುಟ್ಟುವುದು. ಗತ ರಾತ್ರಿಯ ದುರ್ಘಟನೆಯಿಂದ ಅದೆಷ್ಟು ಮಂದಿ ಮೃತ

ಹುಟ್ಟಿರುವರೋ, ಅವರ ಪ್ರಿಯ ಜನರ ಶೋಕದಲ್ಲಿ ಸಹಾನುಭೂತಿಯನ್ನು ಪ್ರಕಟಿಸದಿರಲಾಗುವುದಿಲ್ಲ. ಯಾವ ಸಿಗ್ನಲ್ಲರನ ತಪ್ಪಿನಿಂದ ಅಪಘಾತ ವಾಗಿದೆಯೋ, ಆ ಬಡಪಾಯಿಯು ಇಡೀ ಜೀವನದಲ್ಲಿ ಪಶ್ಚಾತ್ತಾಪಪಡ ಬಹುದು. ಅವನಿಗೆ ತುಂಬಾ ಕಷ್ಟವಿದೆ. ಜೀವಂತನಾಗಿರುವುದೂ ಕಷ್ಟ ವಾಗಿದೆ. ನಾನು ಯಥಾಶಕ್ತಿ ಅವನನ್ನು ಳಿಸಲು ಪ್ರಯತ್ನಿಸುವೆನು. ಅವನ ಅವಸ್ಥೆಯನ್ನೆಣಿಸಿದರೆ ದುಃಖವಾಗುವದು. ಅವನು ನಿಜವಾಗಿಯೂ ಕೃಪೆಗೆ ಪಾತ್ರನು.

ಸ್ನಿತ್ತ—ಸಂಭವತಃ ರೇಲ್ವೇ ಕಂಪನಿಯು ಅವನನ್ನು ತಳ್ಳಿಹಾಕ ಲಿಕ್ಕೂ ಸಾಕು; ಇದಕ್ಕೆ ನಿಮ್ಮ ಅಭಿಪ್ರಾಯವೇನು?

ಬ್ಲೇಕ—ನನಗೂ ಹಾಗೆಯೇ ಅನಿಸುತ್ತದೆ. ನೌಕರಿ ತಪ್ಪಿಹೋದ ಬಳಿಕ ಆ ಬಡವನು ಅದೆಂತು ತನ್ನ ಪರಿವಾರವನ್ನು ಸಲಹುವನೋ, ದೇವ ರಿಗೇ ಗೊತ್ತು? ಲೋಕದಲ್ಲಿ ಬಡವರ ಬಾಳುವೆಯು ತುಂಬಾ ದುಃಖ ಮಯವಾದುದು!

---

## ಬಿಕ್ಕಟ್ಟಿನ ಪ್ರಸಂಗ

ರೇಲ್ವೇ ಅಪಘಾತವಾದ ಮಾರನೇ ದಿವಸ ಬ್ಲೇಕನು ಲಂಡನ್ನಿಗೆ ಹೊರಟನು. ಪೋಲನನ್ನು ಬೇಗನೆ ನೋಡುವ ಇಚ್ಛೆಇದ್ದಾಗ್ಯೂ ಕಾರ್ಯ ವಶಾತ್ ಅಂದೇ ರಾತ್ರಿ ಅವನಿಗೆ ಲಿವ್ಹರಪುಲಕ್ಕೆ ಹೋಗಬೇಕಾಯಿತು. ಎರಡು ಸಪ್ತಾಹದೊಳಗೆ ಅಲ್ಲಿಂದ ಮರಳಲಾಗಲಿಲ್ಲ.

ಯಾವ ದಿನ ಸಂಜೆಗೆ ಬ್ಲೇಕನು ಲಿವ್ಹರಪೂಲಿನಿಂದ ಲಂಡನ್ನಕ್ಕೆ ಬಂದನೋ, ಅದೇ ದಿನ ರಾತ್ರಿ ಎಂಟು ತಾಸಿಗೆ ಒಂದು ಟ್ಯಾಕ್ಸಿಯನ್ನೇರಿ ಪೋಲನನ್ನು ಕಾಣುವದಕ್ಕಾಗಿ ಹೊರಬಿದ್ದನು. ರಾತ್ರಿ ಒಂಬತ್ತು ತಾಸಿಗೆ ನಂ. ೧೭೭ನೇ ಅಂಶ್ಲೋ ಸ್ಕ್ವಾಯರಿನ ಪೋಲನ ಮನೆಯ ಮುಂದೆ ಕೆಳ ಗಿಳಿದನು.

ಬಾಗಿಲಿನಲ್ಲೊಬ್ಬ ಮನುಷ್ಯನಿದ್ದನು. ಬ್ಲೇಕನ ಕಾರ್ಡ ತೆಗೆದು ಕೊಂಡು ಆತನು ತನ್ನೊಡೆಯನ ಬಳಿಗೆ ಹೋದನು. ಕೆಲ ನಿಮಿಷಗಳ ಮೇಲೆ ಹಿಂದಿರುಗಿ ಬಂದು, ಆ ಮನುಷ್ಯನು ಬ್ಲೇಕನನ್ನು ಮನೆಯೊಳಗೆ ಕರೆದೊಯ್ದನು.

ಕೋಣೆಯನ್ನು ತಲುಪುತ್ತಲೆ ಅದು ಪೋಲನ ಆಫೀಸ ರೂಮೆಂದು ಬ್ಲೇಕನು ತಿಳಿದನು. ಕೋಣೆಯ ನಡುವೆಯೊಂದು ದೊಡ್ಡ ಮೇಜಿದ್ದಿತು. ಅದರ ಮೇಲ್ಗಡೆ ಇಲೆಕ್ಟ್ರಿಕ್ ದೀಪ ಉರಿಯುತ್ತಿದ್ದಿತು. ಮೇಜಿನ ಮೇಲೆ ರೆಜಿಷ್ಟರ ಮುಂತಾದವುಗಳು ಇಡಲ್ಪಟ್ಟಿದ್ದುವು. ಒಂದಿಷ್ಟು ಕಾಗದಗಳೂ ಇದ್ದುವು.

ಬ್ಲೇಕನು ಪ್ರವೇಶಿಸಿದೊಡನೆ ಪೋಲನು ಆದರದಿಂದವನನ್ನು ಅಭಿವಂದಿಸುತ್ತ ನುಡಿದನು:— ನಿಮ್ಮ ದರ್ಶನ ಪಡೆದು ನಾನು ತುಂಬಾ ಆನಂದಿತನಾದೆ. ಪ್ರಿಯ ಬ್ಲೇಕ! ನೀವು ಕಷ್ಟಪಟ್ಟು ಇಷ್ಟು ದೂರಿನಿಂದ ಇಲ್ಲಿಗೆ ಬಂದುದು ನನ್ನ ಪರಮ ಸೌಭಾಗ್ಯದ ವಿಷಯ.

ಬ್ಲೇಕ— ಕೆಲ ದಿನ ಮುಂಚೆಯೇ ನಾನಿಲ್ಲಿಗೆ ಬರಬೇಕಿದ್ದಿತು; ಆದರೆ ಅನೇಕ ಅಗತ್ಯದ ಕೆಲಸಗಳ ಗೊಂದಲದಲ್ಲಿ ಇಷ್ಟು ದಿನಗಳ ವರೆಗೆ ನಿನ್ನನ್ನು ಭೇಟಿಮಾಡಲಿಕ್ಕಾಗಲಿಲ್ಲ. ನಾನಿಲ್ಲಿರಲಿಲ್ಲ. ಈ ದಿನ ಇಲ್ಲಿಗೆ ಬಂದವನೇ ನಿನ್ನ ಬಳಿಗೆ ಬಂದೆನು. ನಿನ್ನನ್ನು ಭೇಟಿ ಮಾಡಲಿಕ್ಕೆ ವಿಶೇಷವಾದೊಂದು ಕಾರಣವಿದೆ

ಪೋಲ—ತಾವು ನನ್ನ ತಂದೆಯ ಅಂತ್ಯಕಾಲದಲ್ಲಿ ಮಾಡಿದ ಉಪಕಾರಕ್ಕಾಗಿ ನಾನು ತಮಗದೆಷ್ಟು ಕೃತಜ್ಞನಾಗಿರುವೆನೆಂಬುದನ್ನು ಪ್ರಕಟಿಸಲು ನನ್ನ ಹತ್ತಿರ ನಾಲಿಗೆಯಿಲ್ಲ. ಅವರ ಮೃತ ಶರೀರವನ್ನು ಸಮಾಹಿತಗೊಳಿಸಿ ಹತ್ತು ದಿನವಾಯಿತು. ಅವರ ಮರಣ ವಾರ್ತೆಯನ್ನು ಕೇಳಿ ನಾನು ಘಟನಾ ಸ್ಥಳಕ್ಕೆ ಹೋಗಿದ್ದೆನು. ಆ ನಂತರ ಮೃತ ದೇಹವನ್ನಿಲ್ಲಿಗೆ ತರಿಸಿದ್ದನು. ತಾವು ತಮ್ಮ ಜನರ ಕೈಯಲ್ಲಿ ಕಳುಹಿಸಿದ ಉಯಿಲುನಾಮೆಯೂ ಪತ್ರವೂ ನನಗೆ ಸಿಕ್ಕಿದವು. ಸಾಯುವಾಗ ನನ್ನನ್ನು ನೋಡದಿದ್ದುದರಿಂದಲೂ ನನ್ನೊಂದಿಗೆ ಮಾಡಲಾದ ವ್ಯವಹಾರದಿಂದಲೂ ಅವರು ತುಂಬಾ ದುಃಖಿತರಾಗಿದ್ದರೆಂಬುದನ್ನು ನಿಮ್ಮ ಪತ್ರದಲ್ಲೋದಿ ನಾನು ಬಹಳ ವ್ಯಥಿತನಾದೆನು. ಅವರು ಸಾಯಲಿಕ್ಕೆ ಕ್ಷಣಕಾಲ ಮೊದಲಾದರೂ ನಾನವರ ಹತ್ತಿರ ತಲುಪಿರುತ್ತಿದ್ದರೆ, ಇಂದು ನನಗಿಷ್ಟು ವೇದನೆಯಾಗುತ್ತಿರಲಿಲ್ಲ. ಸಾಮಾನ್ಯವಾದ ವಿಷಯಕ್ಕಾಗಿ ನಾನವರಿಗೆ ಅದಾವ ಕಷ್ಟ ಕೊಟ್ಟಿದ್ದೆನೋ, ಅದು ನೆನಪಿಗೆ ಬರುತ್ತಲೆ ದುಃಖದಿಂದ ಹೃದಯವು ಇಬ್ಭಾಗವಾಗುತ್ತದೆ.

ಹಠಾತ್ತಾಗಿ ಪೋಲನು ಸುಮ್ಮನಾದನು. ಅವನ ಕಂಗಳು ಕಂಬನಿ ದುಂಬಿ ಬಂದವು. ಕೆಲ ನಿಮಿಷಗಳ ವರೆಗೆ ಅವನ ಬಾಯಿಂದ ಅದಾವ ಶಬ್ದವೂ ಹೊರಡಲಿಲ್ಲ.

ಆ ಮೇಲೆ ಆತನು ತಿರುಗಿ ಹೇಳಲಾರಂಭಿಸಿದ:—ಉಯಿಲನಾಮೆ ಯನ್ನು ರುಜುಪಡಿಸಲು ಏನೇನು ಅಗತ್ಯವಿದ್ದಿತೋ, ಅದೆಲ್ಲವನ್ನೂ ನಾನು ಮಾಡಿರುವೆನು. ತಮ್ಮ ಋಣವನ್ನು ನಾನೆಂದೆಂದಿಗೂ ತೀರಿಸದಿರ ಲಾರೆನು. ಮೊದಲು ನನ್ನ ತಂದೆಯು ಹಿಲ್ಡರ್ಸನಿಗನುಕೂಲವಾಗಿ ಒಂದು ಉಯಿಲನ್ನು ಬರೆದಿದ್ದರೆಂದು ನಾನು ಬಲ್ಲೆನು. ನೀವು ನನ್ನ ಪಕ್ಷವನ್ನು ಸಮರ್ಥಿಸಿ, ಈ ಹೊಸ ಉಯಿಲನ್ನು ತಯಾರಿಸದಿರುತ್ತಿದ್ದರೆ ನನ್ನ ತಂದೆಯ ಐಶ್ವರ್ಯವೆಲ್ಲವೂ ಹಿಲ್ಡರ್ಸನ ಪಾಲಾಗುತ್ತಿದ್ದಿತು; ಅದರಲ್ಲಿ ಎಳ್ಳನಿತೂ ಸಂಶಯವಿಲ್ಲ. ನನ್ನ ಅದೃಷ್ಟದಿಂದಲೇ ಆ ವೇಳೆ ತಾವಲ್ಲಿಗೆ ದಯಮಾಡಿ ಸಿದ್ದಿರಿ.

ಬ್ಲೇಕ— ನನ್ನಿಂದಾಗಬಹುದಾದುದೆಲ್ಲವನ್ನೂ ನಾನು ನಿನಗಾಗಿ ಮಾಡಿರುವುದು ಸಹಜ; ಆದರೆ ಅದರಿಂದ ನನಗೆ ತೃಪ್ತಿಯಿಲ್ಲ. ನನ್ನಿಂದ ನಿನಗಾಗಿ ಬೇರೇನೂ ಮಾಡಲಾಗಲಿಲ್ಲವಲ್ಲಾ! ಎಂದು ನನಗೆ ದುಃಖ ವಾಗುತ್ತದೆ ಕಾಗದದಲ್ಲಿ ನಾನು ಎಲ್ಲ ಮಾತುಗಳನ್ನೂ ನಿನಗೆ ಬರೆದಿಲ್ಲ. ನಿನ್ನನ್ನು ಕಂಡೇ ಎಲ್ಲವನ್ನೂ ತಿಳಿಸುವ ಇಚ್ಛೆಯಿದ್ದಿತು. ಹೊಸ ಉಯಿ ಲಿನ ಮೇಲೆ ಹಸ್ತಾಕ್ಷರ ಮಾಡಿದ ಮೇಲೆ ನಿನ್ನ ತಂದೆಯು ನನ್ನ ಹತ್ತಿರ ಪೋಲನು ಆಂಗ್ಲ ಪ್ರಜೆಯಾಗುವ ವಿಷಯದಲ್ಲಿ ನಿಮ್ಮ ಮತವೇನೆಂದು ಕೇಳಿದ್ದನು. ಈ ವಿಷಯದಲ್ಲಿ ನಾನವರೊಂದಿಗೆ ವಾದವಿವಾದ ಮಾಡಿ, ಅಂತೂ ಕೊನೆಗೆ ನೀವು ತಪ್ಪುಹಾದಿಯಲ್ಲಿರುವಿರೆಂದು ನಾನವರಿಗೆ ಮನ ದಟ್ಟು ಮಾಡಿದ್ದೆನು. ಅನಂತರ ಅವರು ಬೇರೆ ಉಯಿಲನ್ನು ಬರೆದು, ನಿನ್ನ ಸ್ವಾಧೀನತೆಗೆ ಅಡ್ಡಿ ಮಾಡದಿರಲು ಒಡಂಬಟ್ಟಿದ್ದರು; ಆದರೆ ಅಷ್ಟ ರೊಳಗೇ ಅವರು ದೈವಾಧೀನರಾದರು! ಬೇರೆ ಉಯಿಲನ್ನು ಬರೆಯಲು ನನಗೆ ಅವಕಾಶವೇ ದೊರೆಯಲಿಲ್ಲ. ಇದೇ ನನಗೀಗ ಪರಿತಾಪಕ್ಕೆ ಕಾರಣವಾಗಿದೆ.

ಪೋಲ—ಅವರು ನನ್ನ ಮೇಲಿದ್ದ ತಮ್ಮ ವಿರುದ್ಧ ಭಾವವನ್ನು ತೊರೆದಿದ್ದರೆಂಬುದರಿಂದಲೇ ನಾನು ತುಂಬಾ ಸಂತುಷ್ಟನಾದೆ. ತಂದೆ

ಯುವರು ಮೊದಲಿನ ಕಾಗದವನ್ನು ರದ್ದುಮಾಡಿಸದಿರುತ್ತಿದ್ದರೆ ಬಹಳ ಕಷ್ಟವನ್ನು ಅನುಭವಿಸಬೇಕಾಗುತ್ತಿತ್ತೆಂಬುದನ್ನು ನಾನು ಬಲ್ಲೆನು. ನಾನು ಹಾದಿಯ ತಿರುಕನಾಗುತ್ತಿದ್ದೆನಲ್ಲದೆ, ಪುನಃ ನಾನು ಜೀವನ ಸಂಗ್ರಾಮದಲ್ಲಿ ಪ್ರವೃತ್ತನಾಗಬೇಕಾಗುತ್ತಿದ್ದಿತು. ತಮ್ಮ ಅನುಗ್ರಹದಿಂದ ನನ್ನ ಆ ಭಾವೀ ಸಂಕಟವು ಕಳೆದು ಹೋಯಿತು; ಆದರೆ ಹಿಲ್ಡರ್ಸನ ಆಶೆಯು ನಿರ್ಮೂಲವಾಯಿತು; ಇದು ಕೂಡ ಅಲ್ಪ ಸಂಕಷ್ಟದ ವಿಷಯವಲ್ಲ. ಆದರೂ ಅವನಿಗಿರುವ ಆದಾಯದಿಂದಲೇ ಅವನ ಜೀವನವು ಸುಖರೂಪವಾಗಿ ಸಾಗಬಲ್ಲುದು.

ಬ್ಲೇಕ—ಆದರೆ ನಿನ್ನ ತಂದೆಯವರು ಆ ಯುವಕನು ತಮ್ಮ ಹಣವನ್ನು ಹೊಂದಲಿಕ್ಕೆ ಸರ್ವಥಾ ಅಯೋಗ್ಯನೆಂದು ಭಾವಿಸುತ್ತಿದ್ದರು. ಆತನ ಮೇಲೆ ಅವರಿಗೆ ಲೇಶವೂ ವಿಶ್ವಾಸವಿದ್ದಿಲ್ಲ. ನಿನಗೀ ವಿಷಯ ತಿಳಿಯುದೇನು?

ಪೋಲ—ಹೌದು, ಗೊತ್ತಿದೆ; ಹಿಲ್ಡರ್ಸನ ಸ್ವಭಾವವೂ ಚರಿತ್ರವೂ ಪವಿತ್ರವಿಲ್ಲವೆಂದು ನನಗೆ ಗೊತ್ತಿದೆ. ಅವನು ವಿವಿಧ ದುಷ್ಕರ್ಮಗಳಿಂದ ಹಣವನ್ನು ದೋಚುತ್ತಾನೆ. ಕಳೆದ ವಾರ ನಾನು, ನನ್ನ ತಂದೆಯವರು ಹೊಸ ಉಯಿಲಿನಿಂದ ತಮ್ಮ ಸಮಸ್ತ ಸಂಪತ್ತಿಯ ಉತ್ತರಾಧಿಕಾರವನ್ನು ನನಗೆ ಕೊಟ್ಟು ಹೋಗಿರುವರೆಂದೂ, ಆದರೆ ನಾನಿದರಲ್ಲಿ ನಿನ್ನನ್ನು ಸಂಪೂರ್ಣವಾಗಿ ವಂಚಿಸಲೆಳಿಸುವದಿಲ್ಲವೆಂದೂ, ನಿನಗೆ ಮಾಸಿಕ ವೃತ್ತಿಯ ವ್ಯವಸ್ಥೆ ಮಾಡಬೇಕೆಂದಿರುವೆನೆಂದೂ ಅವನಿಗೆ ಬರೆದಿದ್ದೆನು; ಆದರೆ ಹಿಲ್ಡರ್ಸನು ನನ್ನ ಪ್ರಸ್ತಾಪವನ್ನು ತಿರಸ್ಕರಿಸಿರುವನು. ನನ್ನ ದಾನವನ್ನಾತನು ಪರಿಗ್ರಹಿಸುವುದಿಲ್ಲವಂತೆ. ಅವನು ಬಹಳ ದಿವಸಗಳಿಂದ ನನ್ನನ್ನು ತಿರಸ್ಕರಿಸುತ್ತ ಬರುತ್ತಿದ್ದಾನೆ; ನನ್ನನ್ನವನು ತುಂಬಾ ದ್ವೇಷಿಸುತ್ತಾನೆ. ತಂದೆಯವರು ಅವನನ್ನು ತಮ್ಮ ಐಶ್ವರ್ಯದಿಂದ ವಂಚಿತಗೊಳಿಸಿರುವರೆಂಬುದಕ್ಕಾಗಿ ಈಗವನು ನನ್ನನ್ನು ಸರ್ವನಾಶಗೊಳಿಸಲು ಸಾಧಿಸದೆ ಬಿಡನು. ಬರ್ಲಿನ್ನದಲ್ಲಿರುವ ನನ್ನ ತಂದೆಯ ಎಟರ್ನಿಯಿಂದ, ನಾನು ತಂದೆಯ ಧನಕ್ಕುತ್ತರಾಧಿಕಾರಿಯಾಗಿರುವೆನೆಂಬುದನ್ನು ಅವನು ಕೇಳಿರುವನು.

ಬ್ಲೇಕ—ಅವರು ಮಾಡಿದುದು ಉಚಿತವೇ ಸರಿ. ಹಿಲ್ಡರ್ಸನು ವಾಸ್ತವವಾಗಿ ನರಪಿಶಾಚಿಯೆಂದಾದರೆ, ನೀನೇಕೆ ಧನಸಹಾಯವನ್ನಿತ್ತು

ಆತನನ್ನು ಕುಕರ್ಮಗೊಳಿಸಲುಜ್ಜುಗಿಸುತ್ತೀ? ಈ ಹಣವು ಅವನ ಕೈಗೆ ಬಿದ್ದಿದ್ದರೆ, ನಿನಗವನು ಸ್ವಲ್ಪಾದರೂ ಸಹಾಯ ಮಾಡುತ್ತಿದ್ದನೆ? ಎಂದಿಗೂ ಮಾಡನು. ಇರಲಿ. ಅಂತೂ ಭಯಂಕರವಾದೊಂದು ವಿಪತ್ತಿನಿಂದ ನಿನಗೆ ಬಿಡುಗಡೆಯಾದಂತಾಯಿತು. ಇಂಗ್ಲಂಡದ ಪ್ರಜೆಯಾಗದಿರುವುದರಿಂದ ನಿನಗೇನಾದರೂ ಹಾನಿಯಿದೆಯೇ?

ಫೋಲ:— ಅದನ್ನು ಹೇಳುವುದು ಹೇಗೆ? ಜರ್ಮನಿಯ ಪ್ರಜೆ ಯಾಗುವುದರಲ್ಲಿ ನನಗಾಕ್ಷೇಪವೇನೆಂದು ನೀವು ಕೇಳುವಿರಾ? ನಮ್ಮ ದೇಶದ ಪ್ರತಿಯೊಬ್ಬ ಯುವಕನೂ ಕೆಲವು ವರ್ಷದ ವರೆಗೆ ಯುದ್ಧವಿಭಾಗ ದಲ್ಲಿ ಕೆಲಸ ಮಾಡಲು ಬದ್ಧನಾಗಿರುವನೆಂಬುದು ನಿಮಗೆ ಗೊತ್ತಿರ ಬಹುದು; ಆದರೆ ನಾನಿಷ್ಟರ ವರೆಗೆ ಯುದ್ಧಕಾರ್ಯದಲ್ಲಿ ಪ್ರವೃತ್ತ ನಾಗಿಲ್ಲ; ಯುದ್ಧವಿದ್ಯೆಯನ್ನು ಕಲಿಯಲಿಲ್ಲ. ನಾನು ಇಂಗ್ಲಂಡದ ಪ್ರಜೆ ಯಾಗಿರದ ಪಕ್ಷದಲ್ಲಿ, ಒಡನೆಯೇ ಅಲ್ಲಿಗೆ ಹೋಗಿ ನಿಶ್ಚಿತ ವರ್ಷಗಳ ವರೆಗೆ ಸೈನ್ಯವಿಭಾಗದಲ್ಲಿ ಸೇರಿಕೊಂಡು ಕೆಲಸ ಕಲಿಯಲೇ ಬೇಕಾಗು ವುದು. ಇಂಗ್ಲಂಡದ ಪ್ರಜೆಯಾಗದ ವಿನಃ ಈ ಸಂಕಟದಿಂದ ನನಗು ದ್ಧಾರವಾಗದು. ತಂದೆಯವರು ಮೃತಪಟ್ಟುದರಿಂದ, ಅವರ ಕಾರಭಾರದ ವ್ಯವಸ್ಥೆ ಮಾಡುವ ಸಲುವಾಗಿ ಶೀಘ್ರವೇ ನಾನು ಬರ್ಲಿನ್ನಕ್ಕೆ ಹೋಗ ಬೇಕಾಗುವುದು. ಅಲ್ಲಿ ಕೆಲವು ದಿನಗಳ ವರೆಗೆ ಇದ್ದ ಹೊರತು ಕೆಲಸದ ವ್ಯವಸ್ಥೆಯಾಗದು. ಜರ್ಮನಿಗೆ ಹೊರಡುತ್ತಲೆ, ಸೈನಿಕ ವಿಭಾಗದಿಂದ ನನಗೆ ಕರೆ ಬರುವುದು ನಿಶ್ಚಯ. ಅದನ್ನೆಲ್ಲ ನೆನಿಸಿ ನಾನು ಅತ್ಯಂತ ಉತ್ಕಂಠಿತನಾಗಿರುವೆನು. ಒಂದು ವೇಳೆ ನಾನು ಇಂಗ್ಲಂಡದ ಪ್ರಜೆ ಯಾದರೆ ನಿಶ್ಚಿಂತೆಯಿಂದ ಅತ್ತ ತೆರಳಬಹುದು. ಆಗ ಜರ್ಮನ್ ಸರ ಕಾರವು ದಂಡಿನ ಶಿಕ್ಷಣವನ್ನು ಕೊಡಲು ನನ್ನನ್ನು ಬಾಧ್ಯಗೊಳಿಸಲಾರದು; ಇತ್ತ ಆಂಗ್ಲ ಪ್ರಜೆಯಾಗುವುದರಿಂದ ತಂದೆಯವರ ಮರಣಶಾಸನಾನು ಸಾರ ನಾನು ಸಮಸ್ತ ಸಂಪತ್ತನ್ನು ಕಳೆದುಕೊಳ್ಳುವೆನು. ಇಕ್ಕಡೆ ಯಲ್ಲಿಯೂ ನನಗೆ ಕುಶಲವಿಲ್ಲ.

ಬ್ಲೇಕ—ನೀನು ಬರ್ಲಿನಕ್ಕೆ ಹೋದೊಡನೆಯೆ ಅಲ್ಲಿಯ ಸರಕಾ ರವು ದಂಡಿನ ಶಿಕ್ಷಣ ಹೊಂದಲು ಬಾಧ್ಯಗೊಳಿಸುವುದೆಂದು ಶಂಕೆ ಪಡುವು

ದೇಕೆ? ನೀನು ಬರ್ಲಿನಕ್ಕೆ ಹೋಗಿರುವಿಯೆಂಬುದನ್ನು ತಿಳಿಯಲು ಅಧಿಕಾರೀ ವರ್ಗದ ಹತ್ತಿರ ವಿಶೇಷ ಸಾಧನವೇನಾದರಿದೆಯೇನು?

ಫ್ರೋಲ—ನನ್ನಂತಹ ತುಚ್ಛ ವ್ಯಕ್ತಿಯ ಆಗಮನವು ಸರಕಾರೀ ಉದ್ಯೋಗಸ್ಥರಿಗೆ ತಿಳಿಯಲಿಕ್ಕಿಲ್ಲ ನಿಜ; ಆದರೆ ಹಿಲ್ಡರ್ಸನು ನನ್ನ ಮೇಲೆ ಹಗೆತನ ಸಾಧಿಸಲು ಸ್ವಲ್ಪವೂ ಹಿಂಜರಿಯಲಾರನು. ನನಗೆ ಹಾನಿಯನ್ನುಂಟು ಮಾಡುವದಕ್ಕಾಗಿ ಅವನು ಪ್ರಾಣಪಣದಿಂದ ಹೆಣಗಾಡುವನೆಂಬುದರಲ್ಲಿ ಸಂದೇಹವಿಲ್ಲ.

ಬ್ಲೇಕ—ನಿಶ್ಚಯವಾಗಿಯೂ ಇದು ಯೋಚಿಸತಕ್ಕ ವಿಷಯ. ಯಾವ ಕಡೆಯಿಂದಲೂ ನಿನಗೆ ಕ್ಷೇಮವಿಲ್ಲ.

ಫ್ರೋಲನು ಗಂಭೀರ ಭಾವದಿಂದ ಕೋಣೆಯೊಳಗೆ ಸುತ್ತಾಡಹತ್ತಿದನು. ಕೆಲ ನಿಮಿಷಗಳು ಕಳೆದ ಬಳಿಕ ಬ್ಲೇಕನನ್ನು ಕುರಿತು:—ನನ್ನ ಹೃದಯದಲ್ಲಿ ಸ್ವದೇಶಾನುರಾಗಕ್ಕೆ ಕೊರತೆಯಿದೆಯೆಂದಾಗಲಿ, ನಾನು ಸೈನಿಕ ಶಿಕ್ಷಣ ಪಡೆಯಲು ಅಳುಕುವೆನೆಂದಾಗಲಿ ನೀವೆಣಿಸಬಾರದು. ನಾನು ಸೈನಿಕ ಶಿಕ್ಷಣ ಪಡೆಯಬೇಕಾದಲ್ಲಿ ನನ್ನ ಪತ್ನಿಯನ್ನು ನೋಡಿಕೊಳ್ಳುವವರಾರು? ವ್ಯವಸಾಯ ಕ್ಷತಿಯ ಭಯದಿಂದಲೇ ನಾನು ಸೈನಿಕ ಶಿಕ್ಷಣವನ್ನು ಪರಿಗ್ರಹಿಸಲಿಚ್ಛಿಸದಿರುವೆನು.

ಮೇಜಿನ ಮೇಲೊಂದು ಪತ್ರವು ಬಿದ್ದಿತ್ತು; ಫ್ರೋಲನ ದೃಷ್ಟಿಯು ಫಕ್ಕನೆ ಅದರ ಮೇಲೆ ಬಿದ್ದಿತು ಅದನ್ನಿನ್ನೂ ಒಡೆದಿರಲಿಲ್ಲ ಫ್ರೋಲನು ಆ ಕಾಗದವನ್ನು ತೆಗೆದುಕೊಂಡು ತೆಗೆದೋದಿದ ನಂತರ ಮೇಜಿನ ಮೇಲದನ್ನೆಸೆದು ಹೇಳಿದ:— ಎಂತಹ ಆಶ್ಚರ್ಯ? ನಾವು ಯಾವ ಮಾತನ್ನಾಲೋಚಿಸುತ್ತಿದ್ದೆವೋ, ಅದೇ ವಿಷಯದ ಪತ್ರವಿದು. ಲಂಡನ್‌ದಲ್ಲಿರುವ ಜರ್ಮನ್ ರಾಜದೂತನು ಒಂದು ವಾರದೊಳಗಾಗಿ ತನ್ನ ಆಫೀಸಿಗೆ ಹಾಜರಾಗುವಂತೆ ನನಗೆ ಬರೆದಿರುವನು. ನಾನು ಸೈನ್ಯಪಡೆಗೆ ಸೇರಲು ಯೋಗ್ಯನೋ-ಅಯೋಗ್ಯನೋ ಎಂಬುದನ್ನು ತಿಳಿಯುವುದಕ್ಕಾಗಿ ಅಲ್ಲಿ ಡಾಕ್ಟರೀ ಪರೀಕ್ಷೆ ಮಾಡಿಸಲಾಗುವುದಂತೆ.

ಬ್ಲೇಕ—ನಿನ್ನ ವಿಪತ್ತಿನ ವಿಷಯವನ್ನು ಕೇಳಿ ನನಗೆ ತುಂಬಾ ವಿಷಾದವಾಯಿತು. ಈ ವ್ಯವಹಾರದಲ್ಲಿ ಹಿಲ್ಡರ್ಸನ ವಿಶೇಷ ತಂತ್ರವೇನಾದರೂ ಇದೆಯೆಂದು ನೀವು ಭಾವಿಸುವೆಯಾ?

ಪೋಲ—ಖಂಡಿತವಾಗಿ. ಅವನ ತಂತ್ರವಿಲ್ಲದಿರುತ್ತಿದ್ದರೆ ಇಷ್ಟು ದಿನಗಳ ಮೇಲೆ ಅಕಸ್ಮಾತ್ತಾಗಿ ನನಗೆಷ್ಟುಕ್ಕೂ ಕರೆಬರುತ್ತಿರಲಿಲ್ಲ.

ಪೋಲನು ಕುರ್ಚಿಯ ಮೇಲೆ ಕುಳಿತು ವಿಚಾರಿಸಹತ್ತಿದನು. ಬ್ಲೇಕನೂ ಅಗ್ಗಿಷ್ಟಿಗೆಯ ಹತ್ತಿರ ಕುಳಿತು ಗಾಢ ಚಿಂತೆಯಲ್ಲಿ ಮಗ್ನನಾದನು.

ಜರ್ಮನ್ನ ರಾಜದೂತನ ಆಜ್ಞೆಯನ್ನು ಪಾಲಿಸದಿದ್ದರೆ, ಪೋಲನಿಗವನೇನೂ ಹಾನಿಯುಂಟು ಮಾಡಲಾರನು ನಿಜ; ಆದರೆ ಪೋಲನು ಜರ್ಮನಿಗೆ ಪ್ರಸ್ಥಾನ ಮಾಡಿದ ದಿನವೇ ಸೆರೆಯಾಳಾಗುವನು. ಆ ಮೇಲೆ ಅವನಿಗೆ ಕಠೋರ ದಂಡನೆಯಾಗುವುದು. ಆಗ ಅವನನ್ನು ರಕ್ಷಿಸುವವರಾರು?

ಇದನ್ನೆಲ್ಲ ಯೋಚಿಸಿ ಪೋಲನು ವ್ಯಾಕುಲ ಭಾವದಿಂದ:—ಈಗ ನಾನೇನು ಮಾಡಬೇಕು? ಈ ಸಂಕಷ್ಟದಿಂದ ಪಾರಾಗಲು ಆದಾವ ಹಂಚಿಕೆಯೂ ಕಾಣಿಸುವುದಿಲ್ಲ. ಈ ಆಜ್ಞೆಯನ್ನುಲ್ಲಂಘನೆ ಮಾಡಿದುದಾದರೆ, ನನಗೆ ಭವಿಷ್ಯದಲ್ಲೆಂದೂ ಸ್ವದೇಶದಲ್ಲಿ ಕಾಲಿಡಲು ಎಡೆ ಸಿಗದು. ಜರ್ಮನಿಯ ಗಡಿಯಲ್ಲಡಿಯಿಟ್ಟ ಕ್ಷಣವೇ ಅಲ್ಲಿಯ ಸರಕಾರವು ನನ್ನನ್ನು ಸೆರೆಹಿಡಿದೊಯ್ಯುವುದು. ಇನ್ನು ಸೈನ್ಯದಳಕ್ಕೆ ಸೇರಿದೆನಾದರೂ ಕೂಡ ಹಿಲ್ಡರ್ಸನು ಒಂದಿಲ್ಲೊಂದು ತರದ ವಿರುದ್ಧವಾದ ಒಳಸಂಚು ನಡೆಸಿ, ನನ್ನನ್ನು ಗಂಡಾಂತರಕ್ಕೆ ಕೆಡುಹದೆ ಬಿಡನು. ರಾಜಧಾನಿಗೆ ಬಹು ದೂರವಿರುವ ಯಾವುದಾದರೂ ಕೋಟೆಯಲ್ಲಿ ಶಿಕ್ಷಣ ಹೊಂದಲು ಕಳುಹಿಸಲೂ ಬಹುದು. ಬರ್ಲಿನ್ನಿನಲ್ಲಿಯೇ ಒಂದು ವೇಳೆ ಸೈನಿಕ ಶಿಕ್ಷಣವಿತ್ತುದಾದರೆ, ನನ್ನ ವ್ಯವಸಾಯವನ್ನು ನೋಡಿಕೊಳ್ಳಲು ನನಗೆ ಸಂದರ್ಭ ಸಿಕ್ಕೀತು. ನನ್ನ ಹೆಂಡತಿಯು ಇತ್ತ ಲಂಡನದ ಕಾರ್‍ಯ ನೋಡಬಲ್ಲಳು. ವಿವಾಹಕ್ಕೆ ಮುಂಚೆ ನನ್ನ ಹೆಂಡತಿಯೇ ನನ್ನ ಪ್ರೈವೇಟ ಸೆಕ್ರೆಟರಿಯ ಕೆಲಸ ನೋಡುತ್ತಿದ್ದಳು. ಆದುದರಿಂದ ಅವಳ ವ್ಯಾಪಾರ ಸಂಬಂಧದ ಯೋಗ್ಯತೆಯಲ್ಲಿ ನನಗೆ ಸಂಪೂರ್ಣ ಭರವಸೆಯಿದೆ; ಆದರೆ ಹಿಲ್ಡರ್ಸನು ನನ್ನ ಸೌಕರ್ಯಗಳನ್ನೆಲ್ಲ ನಾಶಗೊಳಿಸಲು ಪ್ರಯತ್ನಿಸಿಯಾನು. ಅವನ ಕೆಲಸದಲ್ಲಿ ವಿಘ್ನವೊಡ್ಡುವಷ್ಟು ನನ್ನಲ್ಲಿ ಶಕ್ತಿಯಿಲ್ಲ.

ಬ್ಲೇಕ—ಆದರೆ ಇದರಿಂದ ನೀನು ಹತಾಶನಾಗಬಾರದು. ಸೈನ್ಯಕ್ಕೆ ಸೇರಲೇಬೇಕಾಗುವುದೆಂದು ನೀನು ಯೋಚಿಸುವುದೇಕೆ? ಸುಲಭವಾಗಿ

ನಿನಗೆ ಬಿಡುಗಡೆಯಾಗುವ ಸಂಭವವಿದೆ. ನಿನಗಿರುವ ಅನಾನುಕೂಲತೆಗಳನ್ನು ತೋರಿಸಿದಲ್ಲಿ ಬಿಡಲಾರರೇನು?

ಪೋಲ— ಅಂಥ ಆಶೆಯಿಲ್ಲ. ಈ ವಿಷಯದಲ್ಲಿ ಜರ್ಮನ್ನ ಸರಕಾರದ ನಿಯಮವು ಅತ್ಯಂತ ಕಠೋರವಿದೆ ವ್ಯಕ್ತಿಗತ ಅನಾನುಕೂಲತೆಯ ಮೊರೆಯಿಟ್ಟು ಅದರಿಂದ ತಪ್ಪಿಸಿಕೊಳ್ಳಲಾಗುವಂತಿಲ್ಲ.

ಬ್ಲೇಕ— ನೀನೊಬ್ಬನೇ ಅಲ್ಲಿಗೆ ಹೋಗುವುದೇನೂ ಇಲ್ಲ. ನಿನ್ನಂತೆ ಇತರರೂ ಅಲ್ಲಿರುವರು ತಾನೇ? ನೀನು ಅರಿಸಲ್ಪಡದಿರಲಿಕ್ಕೂ ಸಾಕು.

ಪೋಲ— ಆ ಆಶೆಯೂ ಇಲ್ಲ. ನಾನೊಂದು ವೇಳೆ ಕಾಹಿಲೆಯಲ್ಲಿದ್ದರೆ ಡಾಕ್ಟರರು ನನ್ನನ್ನು ವಿಮುಕ್ತಗೊಳಿಸಬಹುದಾಗಿತ್ತು; ಆದರೆ ನಾನು ಗಟ್ಟಿಮುಟ್ಟಾಗಿ ನಿರೋಗಿಯಾಗಿದ್ದೇನೆ ಇಂತಹ ಸ್ಥಿತಿಯಲ್ಲಿ ಡಾಕ್ಟರರು ನನ್ನನ್ನೇಕೆ ಬಿಟ್ಟಾರು? ಹಿಲ್ಲರ್ಸನ ಮೇಲಧಿಕಾರಿಗಳು ಅವನಲ್ಲಿ ಪ್ರೀತರಾಗಿರುತ್ತಾರೆ; ಏಕೆಂದರೆ, ಅವನು ಹಲವು ಬಗೆಯಿಂದ ಅವರ ಮನೋರಂಜನೆ ಪಡಿಸುತ್ತಿರುತ್ತಾನೆ. ಆದುದರಿಂದ ಈ ಕೆಲಸವು ಅವನದೇ ಎಂಬುದರಲ್ಲಿ ನನಗೆ ಎಳ್ಳಷ್ಟೂ ಸಂಶಯ ಕಾಣುವುದಿಲ್ಲ. ನಾನು ಬ್ರಿಟಿಶ ಪ್ರಜೆಯಾಗಿದ್ದರೆ, ಇಂದೀ ಸಂಕಟದಲ್ಲಿ ಸಿಲುಕಬೇಕಾಗಿರಲಿಲ್ಲ.

ಬ್ಲೇಕ— ಅದೇನೋ ಸರಿ; ಆದರೆ ಬ್ರಿಟಿಶ ಪ್ರಜೆಯಾಗುವುದರಿಂದ ನೀನು ಬೀದಿಯ ಭಿಕ್ಷುಕನಾಗಬೇಕಾಗುವುದಲ್ಲ!

ಪೋಲ— ನನ್ನ ಸಂಕಟವು ಅನಿವಾರ್ಯವಾದುದು. ಜರ್ಮನ್ನ ರಾಜದೂತನ ಆದೇಶವನ್ನು ಮನ್ನಿಸದಿರುವುದರಿಂದ ಮುಂದೆಂದಿಗೂ ಸ್ವದೇಶದಲ್ಲಿ ಕಾಲಿಡಲವಕಾಶವಿಲ್ಲ. ಅಲ್ಲಿಗೆ ಹೋಗದಿರುವುದರಿಂದ ನನ್ನ ಲಕ್ಷಾಂತರ ರೂಪಾಯಿ ನಷ್ಟವಾಗುವುದು.

ಬ್ಲೇಕ— ಒಳ್ಳೇದು. ನೀನೊಂದು ಕೆಲಸ ಮಾಡಲಾರೆಯಾ? ಲಂಚಕೊಟ್ಟು ಡಾಕ್ಟರರನ್ನು ಒಲಿಸಿಕೊಂಡರೆ ಹೇಗೆ? ಡಾಕ್ಟರೀ ಪರೀಕ್ಷೆಯ ವೇಳೆಯಲ್ಲಿ ಹತ್ತುಸಾವಿರ ರೂಪಾಯಿಯ ಒಂದು ನೋಟನ್ನು ಡಾಕ್ಟರರ ಕೈಯಲ್ಲಿಟ್ಟುದಾದರೆ, ಅವರ ರಿಪೋರ್ಟು ನಿನಗನುಕೂಲವಾಗಿ ಆಗದೆ?

ಪೋಲ— ಅದು ಸರಿ. ಅದನ್ನು ಮಾಡಿ ನೋಡಬಹುದು; ಆದರೆ ಕೊನೆಗಿದರ ಫಲವೇನಾದೀತೆಂದು ನಾನು ಅನುಮಾನಿಸಲಸಮರ್ಥನು.

ಬ್ಲೇಕ—ಫಲವೇನೇ ಆಗಲಿ. ಒಮ್ಮೆ ಪ್ರಯತ್ನಿಸಿ ನೋಡುವುದುತ್ತಮ. ಹತ್ತುಸಾವಿರ ರೂಪಾಯಿಯ ಲೋಭವು ಸಾಮಾನ್ಯವಾದುದಲ್ಲ ಸೈನಿಕ ವಿಭಾಗದ ಅಲ್ಪ ಸಂಬಳ ತಿನ್ನುವ ಡಾಕ್ಟರರು ಹತ್ತುಸಾವಿರ ರೂಪಾಯಿಯ ಲೋಭದಲ್ಲಿ ಬೀಳದಿರಲಾರರು. ನೀನು ನಿರಾಶನಾಗಬೇಡ. ನಾನೂ ನಿನಗೆ ನೆರವಾಗುವೆನು. ಈಗ ನಾನು ಹೋಗುವೆನು; ಇದೇ ವಾರದಲ್ಲಿ ನಾನು ತಿರುಗಿ ಒಮ್ಮೆ ನಿನಗೆ ಸಿಗುವೆನು. ಒಂದು ವೇಳೆ ಮಧ್ಯದಲ್ಲಿ ಬರಲಾಗದಿದ್ದರೂ ಜರ್ಮನ್ ರಾಜದೂತನಲ್ಲಿ ನಾನು ಖಂಡಿತ ನಿನಗೆ ಸಿಗುವೆನು. ರಾಜದೂತನ ಪ್ರಧಾನ ಉದ್ಯೋಗಿಯೊಬ್ಬನಲ್ಲಿ ನನಗೆ ಗೆಳೆತನವಿದೆ. ಅವನ ಸಹಾಯದಿಂದ ನಾನಲ್ಲಿಗೆ ಬರಬಲ್ಲೆ. ಅವನ ಸಹಾಯದಿಂದ ನಿನಗೇನಾದರೂ ಉಪಕಾರವಾಗಬಹುದಾದಲ್ಲಿ ಅವನೆಂದಿಗೂ ವಿಮುಖನಾಗನೆಂದು ನನಗೆ ನಂಬುಗೆಯಿದೆ.

ಪೋಲ—ಬೇಡ. ಈ ವಿಷಯದಲ್ಲಿ ನೀವು ನನಗೆಂದೂ ಉಪಕಾರ ಮಾಡಲಾರಿರಿ. ನನ್ನ ಸಲುವಾಗಿ ಈ ರೀತಿ ನೀವು ಎಲ್ಲ ವಿಧದಿಂದ ಸಿದ್ಧರಾಗಿರುವಿರಲ್ಲ? ಇಷ್ಟಕ್ಕಾಗಿಯೇ ನಾನು ನಿಮಗೆ ಋಣಿಯಾಗಿರುವೆನು. ನನ್ನ ಜೊತೆಗೆ ಡ್ರಾಯಿಂಗ ರೂಮಿಗೆ ಬರೋಣಾಗಲಿ. ಅಲ್ಲಿ ನನ್ನ ಪತ್ನಿಗೆ ನಿಮ್ಮ ಪರಿಚಯ ಮಾಡಿಸಿಕೊಡುವೆನು. ಈಗೀ ವಿಪತ್ತಿನ ವಿಷಯವನ್ನು ಅವಳ ಹತ್ತರ ಹೇಳುವುದು ಅನವಶ್ಯಕ.

ಬ್ಲೇಕನು ಡ್ರಾಯಿಂಗ ರೂಮಿಗೆ ಹೋದನು. ಪೋಲನು ತನ್ನ ಪತ್ನಿಗೆ ಬ್ಲೇಕನ ಪರಿಚಯ ಮಾಡಿಕೊಟ್ಟನು. ಪೋಲನ ಪತ್ನಿ ಮೆಡೆಲಿನಳು ಅನುಪಮ ಸುಂದರಿಯಾಗಿರುವುದನ್ನು ಬ್ಲೇಕನು ಈಕ್ಷಿಸಿದನು!

---

## ಬರ್ಲಿನ್ ಯಾತ್ರೆ

ಅಂದು ಶುಕ್ರವಾರ ದಿವಸ. ಜರ್ಮನ್ನ ರಾಜದೂತನ ಆಫೀಸಿನಲ್ಲಿ ಲಂಡನ್ ನಿವಾಸಿಗಳಾದ ಅನೇಕ ಜರ್ಮನ್ ಯುವಕರು ಆಗಮಿಸಿದ್ದರು. ಅವರಲ್ಲಿ ಕೆಲವರು ಹೋಟೆಲುಗಳಲ್ಲಿಯೂ ಕೆಲವರು ವ್ಯಾಪಾರಿಗಳಲ್ಲಿಯೂ ನೌಕರಿ ಮಾಡುತ್ತಿದ್ದರು. ಸ್ವತಂತ್ರ ವ್ಯಾಪಾರ ನಡೆಸುವಂತಹರೂ ಕೆಲ ಜನರಿದ್ದರು.

ಹನ್ನೊಂದು ತಾಸಿಗೆ ಆಫೀಸಿನ ಕೆಲಸವು ಆರಂಭವಾಯಿತು. ಯಥಾ ಸಮಯಕ್ಕೆ ಬ್ಲೇಕನು ಆಫೀಸಿಗೆ ಬಂದು ಒಂದು ಕಡೆಯಲ್ಲಿ ಹೋಗಿ ನಿಂತುಕೊಂಡನು. ಅಲ್ಲಿದ್ದ ಅನೇಕ ರಾಜಕರ್ಮಚಾರಿಗಳೊಳಗೆ ಒಬ್ಬನ ಹೆಸರು ಮೇಜರ ಸ್ಟಾರ್ಕನೆಂದು. ಅವನು ಬರ್ಲಿನ್ನಿನಿಂದಿಲ್ಲಿಗೆ ಬಂದಿದ್ದನು. ನೋಡಲಿಕ್ಕಾತನು ತುಂಬಾ ಕ್ರೂರನೂ ಕಠೋರನೂ ಆಗಿ ತೋರುತ್ತಿದ್ದನು. ಇನ್ನೊಬ್ಬ ವ್ಯಕ್ತಿಯು ಹೆಸರು ಡಾಕ್ಟರ ಆಡ್ಲರ. ಇವನು ಮಿಲಿಟರಿ ಡಾಕ್ಟರನಿದ್ದನು. ಇವನೂ ಪರೀಕ್ಷೆಮಾಡಲು ಬರ್ಲಿನ್ನದಿಂದಲೇ ಲಂಡನ್ನಿಗೆ ಬಂದಿದ್ದನು. ಮೂರನೆಯವನ ನಾಮಧ್ಯೇಯ ಓಟೋ ಹಿಲ್ಡರ್. ಈತನು ಪೋಲನ ಸೋದರತ್ತೆಯ ಮಗನು. ವಯಸ್ಸು ಬಹಳ ಕಡಿಮೆಯಾಗಿದ್ದು, ಸುಂದರ ಯುವಕನಾಗಿದ್ದನು. ಇವನು ಕುಟಿಲನೂ ಮೋಸಗಾರನೂ ಆದ ಮನುಷ್ಯನೆಂದು ಅವನ ಆಕೃತಿಯಿಂದ ಹೊರಸೂಸುತ್ತಿದ್ದಿತು. ಗುರತಿಲ್ಲದಿದ್ದಾಗ್ಯೂ ಬ್ಲೇಕನೀತನನ್ನು ಅನುಮಾನದಿಂದಲೇ ಗುರತಿಸಿಕೊಂಡನು.

ಮೇಜರ ಸ್ಟಾರ್ಕನ ಅಪ್ಪಣೆಯಿಂದ ಜವಾನನೊಬ್ಬನು ಆಫೀಸಿನ ಬಾಗಿಲಿಗೆ ಬಂದು:—ಕಾರ್ಲ ಫಿಶರ, ಎಂದು ಕೂಗಿದನು.

ಬಂದಿದ್ದ ಜರ್ಮನ್ ಯುವಕರು ಒಂದು ಕೋಣೆಯಲ್ಲಿ ಕುಳಿತು ಪ್ರತೀಕ್ಷಿಸುತ್ತಿದ್ದರು. ಕರೆಯುವನ್ನು ಕೇಳಿ ಉಕ್ತ ನಾಮಧಾರಿಯಾದ ತರುಣನು ಆಫೀಸಿಗೆ ಬಂದನು. ಇವನು ಒಂದು ಹೋಟೆಲಿನಲ್ಲಿ ಬಿಲ್ಲು ಬರೆಯುವ ಕೆಲಸ ಮಾಡುತ್ತಿದ್ದನು.

ಡಾಕ್ಟರನು ಮೇಲ್ಕಂಡ ವ್ಯಕ್ತಿಯ ಹೃದಯವನ್ನು ಯಂತ್ರದ ಮೂಲಕ ಪರೀಕ್ಷಿಸಿ:—ಸೈನ್ಯಪಡೆಗೆ ಸೇರಲು ಯೋಗ್ಯನು, ಎಂದು ನುಡಿದನು.

ಮೇಜರನು ಯುವಕನನ್ನು ಸಂಬೋಧಿಸಿ:—ಕಾರ್ಲ ಫಿಶರ, ನೀನು ಶಿಕ್ಷಣ ಹೊಂದಲು ಆರಿಸಲ್ಪಟ್ಟಿ. ಇನ್ನು ಹತ್ತು ದಿನಗಳಲ್ಲಿ ನೀನು ಬರ್ಲಿನ್ನದಲ್ಲಿ ಹಾಜರಾಗಿ ಸೈನಿಕ ಶಿಕ್ಷಣ ಕಲಿಯಲಾರಂಭಿಸಬೇಕು.

ಕಾರ್ಲ ಫಿಶರನು ಅಸ್ಪುಟ ಸ್ವರದಲ್ಲಿ:— ಆದರೆ ಈಗ ನಾನು ಬರ್ಲಿನಕ್ಕೆ ತೆರಳಲಾರೆ. ಕಾರಣ, ನಾನು ವಿವಾಹ ಮಾಡಿಕೊಂಡಿರುವೆನು ಅವಳ ಪಾಲನೆಯ ಭಾರ ವಹಿಸಲು ನನ್ನ ಹೊರತು ಬೇರಾರೂ

ಇಲ್ಲ. ಇಂತಹ ಸಂದರ್ಭದಲ್ಲಿ ಅವಳನ್ನು ಬಿಟ್ಟು ನಾನು ಹೇಗೆ ಹೋಗ ಬಲ್ಲೆ? ತಾವು ದಯವಿಟ್ಟು ನನ್ನನ್ನು ಬಿಡುಗಡೆ ಮಾಡಬೇಕು.

ಮೇಜರ—ಅಸಾಧ್ಯ. ನಿನ್ನ ಅದಾವ ಆಕ್ಷೇಪವನ್ನೂ ಕೇಳಲಾಗುವು ದಿಲ್ಲ.

ಕಾರ್ಲ ಫಿಶರನು ಸ್ವದೇಶಭಕ್ತನಿದ್ದುದರಿಂದ ಬಹಳ ಆಲೋಚನೆ ಮಾಡಿ ಕೊನೆಗೆ ಹೋಗಲು ಸಮ್ಮತಿಸಿದನು. ಮುಂದೆ ಈ ಆಜ್ಞೆಗೆ ವಿರುದ್ಧ ವಾಗಿ ಆವೇದಿಸಿಕೊಳ್ಳುವೆನೆಂದು ಯೋಚಿಸಿದ. ಆ ಮೇಲೆ ಇನ್ನೊಂದು ಬಾಗಿಲಿನಿಂದ ಹೊರಟು ಹೋದನು.

ಕಾರ್ಲ ಫಿಶರ—ನಾನು ಹೆಂಡತಿಯನ್ನಾರ ಮೇಲೂ ಬಿಟ್ಟು ಹೋಗ ಲಾರೆನು.

ಮೇಜನ—ನಿನ್ನ ಮಾತಿಗೆ ನಾನು ಉತ್ತರ ಕೊಡಲಾರೆ.

ಇನ್ನೊಬ್ಬ ಮನುಷ್ಯನು ಕರೆಯಲ್ಪಟ್ಟನು:—ಫರ್ಡಿನೆಂಡಬೂಲೋ.

ಆ ಯುವಕನು ಬಂದೊಡನೆ ಡಾಕ್ಟರನು ಪೂರ್ವವತ್ ಪಾಸು ಮಾಡಿ ಬಿಟ್ಟನು.

ಇದೇ ಪ್ರಕಾರ ಇಪ್ಪತ್ತೆರಡು ಜನ ಯುವಕರ ಪರೀಕ್ಷೆ ಒಂದು ತಾಸಿ ನಲ್ಲಿ ಕೊನೆಗಂಡಿತು. ಕೆಲವರನ್ನು ಬಿಟ್ಟು ಉಳಿದೆಲ್ಲ ಜನರನ್ನೂ ಡಾಕ್ಟ ರನು ಶಿಕ್ಷಣ ಪಡೆಯಲು ತಕ್ಕವರೆಂದನು.

ಕೊನೆಗೆ ಒಬ್ಬ ಅಲ್ಪವಯಸ್ಕನಾದ ಯುವಕನು ಕರೆಯಲ್ಪಟ್ಟನು. ಅವನ ಹೆಸರು ಹೆನರಿಕ ಅರ್ಥನೆಂದು. ಡಾಕ್ಟರನು ಪರೀಕ್ಷಿಸುವಾಗ ಆತನು ಗಡಗಡನೆ ನಡುಗುತ್ತಿದ್ದನು. ಆ ಮೇಲೆ ಡಾಕ್ಟರನು ಅವನನ್ನು ಪಾಸು ಮಾಡುತ್ತಲೇ ಅವನ ಮೊಗವು ಬತ್ತಿಹೋಯಿತು. ಅವನ ಕಣ್ಣುಗಳಲ್ಲಿ ನೀರು ತುಂಬಿತು. ಅವನ ಭಾವವನ್ನು ಕಂಡು ಬ್ಲೇಕನು ಬಹಳ ವ್ಯಥಿತ ನಾದನು.

ಹೆನರಿಕನು ಹೇಳಿದ—ಮಹಾಶಯ, ದಯಮಾಡಿ ನನ್ನನ್ನೀ ಯಾತ್ರೆ ಯಿಂದ ವಿಮುಕ್ತಗೊಳಿಸಿರಿ. ನಾನು ಅತ್ಯಂತ ಕಷ್ಟದಲ್ಲಿರುವೆನು.

ಮೇಜರ—ಅದಾವ ಕಷ್ಟವಿದೆ ನಿನಗೆ? ಇಂತಹ ಗೌರವದ ಕೆಲಸ ದಲ್ಲೇಕೆ ಅಡ್ಡಿ ಮಾಡುತ್ತಿರುವೆ? ಸ್ವದೇಶಕ್ಕಾಗಿ ಪಿಸ್ತೂಲು ಹಿಡಿಯುವುದು ಸನ್ಮಾನದ ವಿಷಯವಲ್ಲವೇನು?

ಹೆನರಿಕ್—ಸ್ವದೇಶಸೇವೆ ಮಾಡಲು ಅವಕಾಶ ಸಿಗುವುದು ತುಂಬಾ ಸೌಭಾಗ್ಯದ ಮಾತೆಂದು ನಾನು ಬಲ್ಲೆನು; ಆದರೆ ವಿಪತ್ತಿನಲ್ಲಿ ಸಿಲುಕಿರುವ ಕಾರಣ ಈ ಸಲಕ್ಕೆ ಬಿಡುಗಡೆಯನ್ನಪೇಕ್ಷಿಸುತ್ತೇನೆ. ಭವಿಷ್ಯದಲ್ಲಿ ಆನಂದ ಪೂರ್ವಕವಾಗಿ ನಾನು ನಿಮ್ಮಾಜ್ಞೆಯನ್ನು ಪಾಲಿಸುವೆನು; ಆದರೆ ಈ ಸಮಯದಲ್ಲಿ ಮಾತ್ರ ನನಗೀ ದೇಶವನ್ನು ಬಿಡಲು ಉಪಾಯವಿಲ್ಲ.

ಮೇಜರ—ನಿನ್ನ ಆದಾವ ಮಾತೂ ಕೇಳಲ್ಪಡುವುದಿಲ್ಲ. ಹತ್ತು ದಿನಗಳೊಳಗೆ ನೀನು ಬರ್ಲಿನ್ನಕ್ಕೆ ತೆರಳಲೇ ಬೇಕಾಗುವುದು.

ಹೆನರಿಕ್—ರಕ್ಷಿಸಿರಿ, ಮೇಜರ ಸಾಹೇಬ! ನನ್ನ ಮಗಳು ಕಠಿಣ ಕ್ಷಯರೋಗದಿಂದ ಪೀಡಿತಳಾಗಿರುವಳು. ಒಂದು ತಿಂಗಳ ಮೇಲೆ ಅವಳು ಬದುಕುವ ಆಶೆಯಿಲ್ಲ. ಹೀಗಿರುವಾಗ ನಾನವಳನ್ನು ಬಿಟ್ಟು ಬರ್ಲಿನ್ನಕ್ಕೆ ಹೋಗಬೇಕಾದಲ್ಲಿ, ಮರಳಿ ಬಂದಾಗ ನಾನವಳನ್ನು ಕಾಣಲಾರೆ.

ಆದರೆ ನಿಷ್ಠುರನಾದ ಮೇಜರನ ಹೃದಯವು ವಿಚಲಿಸಲಿಲ್ಲ. ಆಗ ಅವನು:—ನಿನ್ನ ಕನ್ಯೆಯ ಅಸಾಧ್ಯ ರೋಗದ ವೃತ್ತಾಂತ ಕೇಳಿ ನನಗೆ ದುಃಖವಾಯಿತು; ಆದರೆ ಅದಾರ ದುಃಖವನ್ನು ಕೇಳಿಯೂ ಕರ್ತವ್ಯ ವನ್ನುಲ್ಲಂಘಿಸುವ ದೌರ್ಬಲ್ಯವು ನನ್ನಲ್ಲಿಲ್ಲ. ಸಾಕು, ಇನ್ನೇನೂ ಹೇಳ ಬೇಕಾದುದಿಲ್ಲ. ಹೋಗು.

ಆದರೂ ಯುವಕನು ಕದಲದೆ ವಿಚಲಿತ ಸ್ವರದಿಂದ:—ಮೇಜರ ಸಾಹೇಬ, ಈ ಸಲ ನನ್ನ ಮೇಲೆ ದಯೆ ತೋರಿಸೋಣಾಗಲಿ.

ಮೇಜರ—ಹೋಗು.

ಯುವಕನು ನಿರುಪಾಯನಾಗಿ ಕಣ್ಣೀರೊರೆಸುತ್ತ ಆ ಕೋಣೆಯಿಂದ ಹೊರಬಿದ್ದನು. ಜವಾನನು ಕೂಗಿದನು:—ಪೋಲ ಅರ್ಕಮನ್ನ!

ಪೋಲನು ಮಾನಸಿಕ ದುರ್ಬಲತೆಯನ್ನು ಮರೆ ಮಾಡಿಕೊಂಡು ಕೋಣೆಯೊಳಗೆ ಪ್ರವೇಶಿಸಿದನು. ಅವನ ಹೃದಯವು ಅಧೀರವಾಗಿದ್ದಿತು. ಷ್ಮೀಕನವನಿಗೆ ಧೈರ್ಯ ತಾಳಲು ಸನ್ನೆ ಮಾಡಿದನು.

ಪೋಲನು ಹಿಲ್ಜರ್ಸನ ಸಮೀಪ ಹೋಗಿ, ಕೈ ಕುಲುಕಲು ತನ್ನ ಕೈಯನ್ನು ಮುಂದೆ ನೀಡುತ್ತ:—ಹಿಲ್ಜರ್ಸ, ಹೇಗಿರುವಿ? ಬಹಳ ದಿನಗಳ ಮೇಲೆ ನಿನ್ನ ದರ್ಶನವಾಯಿತು.

ಹಿಲ್ಡರ್ಸನು ಪೋಲನಿಗೆ ಕೈಕೊಡಲಿಲ್ಲ. ಅವನು ನೀಡಿದ ಕೈಗಳತ್ತ ಗಮನಕೊಡದೆ, ಹಿಲ್ಡರ್ಸನು ಅವಜ್ಞಾಭರಿತ ಸ್ವರದಲ್ಲಿ—ಹೌದು; ಬಹಳ ದಿನಗಳಾದುವು; ಆದರೆ ಇನ್ನು ಸಂಭವತಃ ಸಿಗಲು ಅನುಕೂಲವಾದೀತು. ಬಾ, ಮೇಜರರಿಗೂ ಡಾಕ್ಟರರಿಗೂ ನಿನ್ನ ಪರಿಚಯ ಮಾಡಿಸುವೆ.

ಹಿಲ್ಡರ್ಸನು ಮೇಜರ ಮತ್ತು ಡಾಕ್ಟರರ ಮುಂದೆ ಪೋಲನ ಸಂಕ್ಷಿಪ್ತ ಪರಿಚಯವನ್ನಿತ್ತನು.

ಬಳಿಕ ಪೋಲನ ಡಾಕ್ಟರೀ ಪರೀಕ್ಷೆಗೆ ಆರಂಭವಾಯಿತು. ಅತ್ತಿತ್ತ ನೋಡಿ ಪೋಲನು ಕಿಸೆಯಿಂದ ಹತ್ತುಸಾವಿರ ರೂಪಾಯಿಯ ನೋಟನ್ನು ತೆಗೆದು ಡಾಕ್ಟರನ ಕೈಯಲ್ಲಿಟ್ಟನು.

ಡಾಕ್ಟರನು ನೋಟನ್ನು ತೆಗೆದುಕೊಂಡು ನಗುತ್ತ:—ನೀವು ಈ ರೀತಿ ತಂಗೆಡುವ ಅಗತ್ಯವಿಲ್ಲ. ನಿಮ್ಮ ದೇಹವು ಸ್ವಸ್ಥವೂ ದೃಢವೂ ಇದೆ. ನಾನು ನಿಮ್ಮನ್ನು ಪರೀಕ್ಷೆಯಲ್ಲಿ ಪಾಸ ಮಾಡುತ್ತೇನೆ; ಹಾಗೂ ಸ್ವದೇಶಕ್ಕಾಗಿ ಬಂದೂಕು ಧರಿಸಿ ಮಾತೃಭೂಮಿಯ ಮುಖವನ್ನುಜ್ವಲಗೊಳಿಸುವಿರೆಂದಾಶಿಸುತ್ತೇನೆ.

ಡಾಕ್ಟರನ ಮಾತು ಕೇಳಿ ಪೋಲನ ಎದೆ ಧಸಕ್ಕೆಂದಿತು. ಹತ್ತು ಸಾವಿರ ರೂಪಾಯಿಯೂ ಹೋಯಿತು; ತಂಟೆಯೂ ತಪ್ಪಲಿಲ್ಲ.

ಅಷ್ಟರಲ್ಲಿ ಡಾಕ್ಟರನು ಪೋಲನ ಮುಂದೆ ಆ ನೋಟನ್ನೆಸೆದು ಹೇಳಿದನು:—ಮಹಾಶಯ, ನೀವು ನಿಮ್ಮ ರೂಪಾಯಿ ವಾಪಸು ತೆಗೆದುಕೊಳ್ಳಿರಿ. ನಾನು ಲಂಚಖೋರನಲ್ಲ. ಮಾನ-ಮರ್ಯಾದೆಯನ್ನು ಮಾರಾಟ ಮಾಡುವುದು ನನಗೆ ಸೇರುವುದಿಲ್ಲ.

ಡಾಕ್ಟರನ ಮಾತನ್ನು ಕೇಳಿ ಜನರೆಲ್ಲರೂ ವಿಸ್ಮಯಾನ್ವಿತರಾಗಿ ಆತನ ಕಡೆಗೆ ನೋಡತೊಡಗಿದರು. ಕೆಲ ನಿಮಿಷಗಳ ಪರ್ಯಂತರ ಯಾರ ಮುಖದಿಂದಲೂ ಮಾತು ಹೊರಡಲಿಲ್ಲ. ಮಾತಾ ವಸುಂಧರೆಯು ಬಾಯಿ ಬಿಟ್ಟಿದ್ದರೆ, ಶಾಶ್ವತವಾಗಿ ಆವಳ ಗರ್ಭದಲ್ಲಿ ಸೇರಿರುತ್ತಿದ್ದೆನೆಂದು ಪೋಲನು ಆಲೋಚಿಸುತ್ತಿದ್ದನು. ಬ್ಲೇಕನು ಕೋಪದಿಂದ ಹಲ್ಲು ಕಡಿಯಹತ್ತಿದನು. ಅವನ ಉಪದೇಶದಿಂದಲೇ ಪೋಲನಿಗೀ ಅಪಮಾನವಾಗಿದ್ದಿತು. ಬ್ಲೇಕನಿಗೆ ಮಾನವ ಚರಿತ್ರೆಯ ಸಂಪೂರ್ಣ ಜ್ಞಾನವಿದ್ದಿತು. ಡಾಕ್ಟರನಂತಹ ಸಾಮಾನ್ಯ ಉದ್ಯೋಗಸ್ಥನೊಬ್ಬನು ಹತ್ತುಸಾವಿರ

ರೂಪಾಯಿಗಳ ಲೋಭದಲ್ಲಿ ಬೀಳುವುದು ಸಾಮಾನ್ಯ ಸಂಗತಿಯೆಂದು ಆತನರಿತಿದ್ದನು; ಆದರೆ ಪೋಲನು ನೋಟನ್ನು ಡಾಕ್ಟರನ ಕೈಯಲ್ಲಿಡು ತ್ತಿದ್ದಾಗ ಹಿಲ್ಜರ್ಸನ ದೃಷ್ಟಿಯು ಆ ನೋಟಿನ ಮೇಲೆ ಬಿದ್ದಿದ್ದಿತು. ಆದ ಕಾರಣ ಡಾಕ್ಟರನು ಸಿಕ್ಕಿಬೀಳುವೆನೆಂಬ ಭಯದಿಂದ ಸಾಧುತ್ವವನ್ನು ತೋರಿಸಿದ್ದನು. ಇದನ್ನು ತಿಳಿದೇ ಬ್ಲೇಕನು ಡಾಕ್ಟರನ ಧೃಷ್ಟತನಕ್ಕಾಗಿ ಕ್ರುದ್ಧನಾದನು.

ಡಾಕ್ಟರನ ಮಾತು ಕೇಳಿ ಮೇಜರನು:—ಇದೆಂತಹ ವ್ಯವಹಾರ? ಇವರು ಡಾಕ್ಟರರಿಗೆ ಲಂಚ ಕೊಟ್ಟು ವಶಮಾಡಿಕೊಳ್ಳಲೆಳಸಿದ್ದರೆ? ಇದು ನಂಬಲಿಕ್ಕೆ ಯೋಗ್ಯವಾದ ಮಾತೇ?

ಡಾಕ್ಟರನು ಸಂಯಮ ಸ್ವರದಲ್ಲಿ:—ಹೌದು. ಈ ಮಹಾಶಯರು ನನ್ನನ್ನು ಲಂಚ ತಿನ್ನುವವನೆಂದು ಭಾವಿಸಿದ್ದರು.

ಮೇಜರ—ಒಬ್ಬ ಸಭ್ಯಮನುಷ್ಯರಗೀ ಪ್ರವೃತ್ತಿಯೇ?

ಹಿಲ್ಜರ್ಸ—ಸೋಜಿಗವು! ನನ್ನ ಮಾವನ ಮಗ ಪೋಲನು ಇಂತಹ ನೀಚತನ ಮಾಡಿದನೆ? ಛೀ!

ಮೇಜರ—ಪ್ರಿಯ ಪೋಲ! ನೀನು ಘೋರವಾದ ಅನ್ಯಾಯ ಮಾಡಿ ರುವೆ. ಇದನ್ನು ನಾನು ಉಚ್ಚಾಧಿಕಾರಿಗಳಿಗೆ ಸೂಚಿಸುವೆನು. ಭವಿಷ್ಯ ದಲ್ಲಿದಕ್ಕಾಗಿ ನೀನು ಪಶ್ಚಾತ್ತಾಪಪಡಬೇಕಾಗುವುದು. ಇರಲಿ. ಇನ್ನು ನೀನು ಹತ್ತು ದಿನಗಳೊಳಗೆ ಬರ್ಲಿನ್ನಕ್ಕೆ ಹೊರಡಲು ಸಿದ್ಧನಾಗು.

ಪೋಲನು ಮರ್ಮಾಹತನಾಗಿ ಕೋಣೆಯಿಂದ ಹೊರಬಂದನು; ಹಾಗು ತನ್ನ ಬುದ್ಧಿಯನ್ನು ಧಿಃಕರಿಸಿಕೊಳ್ಳಹತ್ತಿದನು. ಅವನು ತನ್ನ ಇಡೀ ಜೀವನದಲ್ಲಿಂತಹ ಅಪಮಾನವನ್ನೆಂದೂ ಸಹಿಸಿರಲಿಲ್ಲ.

ಹೊರಗೆ ಬಂದ ಮೇಲೆ ಅವನಿಗೆ ಬ್ಲೇಕನ ದರ್ಶನವಾಯಿತು; ಆದರೆ ಯಾರೂ ಮಾತಾಡಲಿಲ್ಲ. ಇಬ್ಬರೂ ಚಿಂತಿತಭಾವದಿಂದ ಬಂಡಿಯಲ್ಲಿ ಕುಳಿ ತರು. ಬಂಡಿ ವೇಗವಾಗಿ ಪೋಲನ ಮನೆಯತ್ತ ಹೊರಟಿತು.

ಈಗ ಪೋಲನ ಬಾಯಿಯಿಂದ ಮಾತು ಹೊರಟಿತು. ಹೇಳಿದ:— ಈ ದಿನ ನಾನು ದೊಡ್ಡ ಮೂರ್ಖತನ ಮಾಡಿದೆ.

ಬ್ಲೇಕನೆಂದ—ಆ ದೋಷ ನನ್ನದೇ. ನೀನಾದರೂ ನನ್ನ ಸಲಹೆ ಯಿಂದಲೇ ಈ ಕೆಲಸ ಮಾಡಿದ್ದೆ.

ಪೋಲ—ಆದರೆ ನೀವು ನನ್ನ ಹಿತದ ದೃಷ್ಟಿಯಿಂದಲೇ ಈ ಸಲಹೆ ಯಿತ್ತಿದ್ದಿರಿ. ಆದುದರಿಂದ ಇದರಲ್ಲಿ ನಿಮ್ಮ ದೋಷವೇನೂ ಇಲ್ಲ.

ಬ್ಲೇಕ—ನನ್ನ ಸಲಹೆ ಸರಿಯಾಗಿಯೇ ಇದ್ದಿತು; ನೀನೆಂದೂ ಲಜ್ಜಿತ ನಾಗಬೇಕಿರಲಿಲ್ಲ; ಆದರೆ ನನ್ನ ಸಲಹೆಗೆ ವ್ಯತಿರಿಕ್ತವಾದ ಫಲವೇಕಾಯಿ ತೆಂಬುದನ್ನು ನೀನು ತಿಳಿಯಲಿಲ್ಲ ನಾನು ಅದನ್ನು ತಿಳಿದುಕೊಂಡಿರು ವೆನು. ನೀನು ಡಾಕ್ಟರನಿಗೆ ನೋಟನ್ನು ಕೊಡುವಾಗ ಹಿಲ್ಡರ್ಸನನದನ್ನು ನೋಡಿದ್ದನು. ಹಾಗಾಗಿ ಡಾಕ್ಟರನು ತನ್ನ ರಕ್ಷಣೆಗಾಗಿ ಅದನ್ನು ಹಿಂದಕ್ಕೆ ಕೊಟ್ಟುಬಿಟ್ಟನು.

ಪೋಲನು ನಿಟ್ಟುಸಿರ್ಗರೆದು:—ಹಿಲ್ಡರ್ಸನಂತೂ ನನ್ನ ಕಡು ಹಗೆ ಯಾಗಿಯೇ ಇದ್ದನು. ನನ್ನ ಮೂರ್ಖತನದಿಂದಾಗಿ ಮಧ್ಯದಲ್ಲಿ ಮತ್ತಿಬ್ಬರು ಹಗೆಗಳನ್ನು ಮಾಡಿಕೊಂಡೆನು. ಆ ಮೇಜರನೂ ಡಾಕ್ಟರನೂ ಭವಿಷ್ಯ ದಲ್ಲಿ ನನ್ನ ಮೇಲೆ ಹಗೆತನ ಸಾಧಿಸಲು ಹಿಂದೆಗೆಯರು.

ಬ್ಲೇಕ—ನೀನು ಎಚ್ಚರಿಕೆಯಿಂದ ಸೈನಿಕ ಕಾರ್ಯವನ್ನು ಮಾಡು. ಅವರೇನೂ ಮಾಡಲಾರರು. ನಿಶ್ಚಿಂತನಾಗಿರು. ಡಾಕ್ಟರನಿಗೆ ಲಂಚಕೊಟ್ಟ ಸಂಬಂಧದಲ್ಲಿ ಬೇರೆ ಏನೂ ಆಗಲಾರದು.

ಪೋಲ—ಇದು ನಿಮಗೆ ಹೇಗೆ ಗೊತ್ತು?

ಬ್ಲೇಕ—ಮಿಲಟರಿಯ ಡಾಕ್ಟರರೆಲ್ಲರೂ ಸಂದರ್ಭ ನೋಡಿ ಲಂಚ ತಿನ್ನುತ್ತಿರುತ್ತಾರೆ.

ಪೋಲ—ಆಗಬೇಕಾದುದೆಲ್ಲ ಆಗಿಯೇ ಆಗುವುದು. ಯೋಚಿಸು ವುದರಿಂದೇನು ಪ್ರಯೋಜನ? ಈಗ ನೀವು ನಮ್ಮ ಮನೆಗೆ ನಡೆಯಿರಿ. ನನ್ನಿಂದ ಹೆಂಡತಿಯ ಮುಂದೇನೂ ಹೇಳಲಾಗುವುದಿಲ್ಲ. ನೀವೇ ಎಲ್ಲ ಹೇಳಿ, ಅವಳನ್ನು ಸಮಾಧಾನ ಪಡಿಸಿರಿ.

ನೋಡುವಷ್ಟರಲ್ಲಿ ಬಂಡಿಯು ಪೋಲನ ಮನೆಯ ಮುಂದೆ ಬಂದು ನಿಂತಿತು. ಪೋಲನು ಬ್ಲೇಕನನ್ನು ಕರೆದುಕೊಂಡು ಮನೆಯೊಳಗೆ ಹೋದನು. ಅವನ ಪರಮ ಸುಂದರಿಯಾದ ಪತ್ನಿ ಮೆಡೆಲಿನ್‌ಳು ಬ್ಲೇಕ ನನ್ನು ಸ್ವಾಗತೀಕರಿಸಿದಳು; ಆದರೆ ಬ್ಲೇಕನ ಮುಖದಿಂದ ಪೋಲನ ಸಂಕ ಟದ ಸುದ್ದಿಯನ್ನು ಕೇಳಿ, ಅವಳ ಕಣ್ಣಿಂದ ನೀರು ಹರಿಯಹತ್ತಿತು.

ಪೂರ್ವೋಕ್ತ ಘಟನೆ ನಡೆದ ಒಂದು ವಾರ ಕಳೆದ ಮೇಲೆ ಅದೊಂದು ದಿನ. ಸುಮಾರು ಒಂಬತ್ತು ತಾಸಿನ ವೇಳೆ. ಲೀವರಪೂಲ ಸ್ಟ್ರೀಟ್ ಎಂಬ ರೇಲ್ವೇ ಸ್ಟೇಶನದ ಪ್ಲಾಟ ಫಾರ್ಮಿನ ಮೇಲೆ ಬ್ಲೇಕನೂ ಪೋಲನೂ ಅವನ ಪತ್ನಿಯೂ ಟ್ರೇನಿನ ಹತ್ತಿರ ಉದಾಸೀನ ಭಾವದಿಂದ ನಿಂತು ಪರಾಮರ್ಶಿ ಸುತ್ತಿದ್ದರು. ಪ್ಲಾಟ ಫಾರ್ಮ ಮೇಲಿನ ಕೋಲಾಹಲದ ಕಡೆಗೆ ಅವರಾರ ಧ್ಯಾನವೂ ಇದ್ದಿಲ್ಲ. ಮುಂಬರುವ ವಿರಹದ ಸಂಭಾವನೆಯಿಂದ ಉರ್ವರ ಹೃದಯವೂ ವ್ಯಥಿತವಾಗಿದ್ದಿತು. ಬಂಡಿಯು ಹೊರಡಲಿನ್ನು ಹೆಚ್ಚು ತಡ ವಿರಲಿಲ್ಲ. ಈ ಬಂಡಿಯು ಪಾರ್ಕಸ್ಟನ ಬಂದರಕ್ಕೆ ಪ್ರಯಾಣಿಕರನ್ನು ಕೊಂಡೊಯ್ದೊಳಿಸುವುದು. ಐಶ್ವರ್ಯ, ವಿಲಾಸ, ಸುಖ ಮತ್ತು ಸ್ವಾಧೀನತೆಗಳನ್ನು ಇಂಗ್ಲಂಡದಲ್ಲಿ ಬಿಟ್ಟು, ಪ್ರಿಯತಮೆಯಿಂದ ದೀರ್ಘಕಾಲಕ್ಕಾಗಿ ಬೀಳ್ಕೊಂಡು, ಕಠೋರವಾದ ಸೈನಿಕ ವ್ರತವನ್ನು ಕೈಕೊಳ್ಳಲೋಸುಗ ಪೋಲ ಇದೇ ಟ್ರೇನಿನಲ್ಲಿ ದೂರವರ್ತಿಯಾದ ಬರ್ಲಿನ್ನ ನಗರಕ್ಕೆ ನಡೆದಿರುವನು.

ಬ್ಲೇಕನು ಸತಿ-ಪತಿಗಳ ಮರ್ಮಾಂತಿಕ ವೇದನೆಯನ್ನು ಮನಗಂಡು, ಅವರ ವಾರ್ತಾಲಾಪಕ್ಕೆ ತೊಂದರೆಯಾದೀತೆಂದು ಯೋಚಿಸಿ, ಸ್ವಲ್ಪ ದೂರದಲ್ಲೇ ನಿಂತು ಸಮಾಚಾರ ಪತ್ರವನ್ನೋದುತ್ತಿದ್ದನು.

ತದನಂತರ ಬಂಡಿ ಬಿಡುವ ಗಂಟೆಯಾಯಿತು. ಬ್ಲೇಕನು ಪತ್ರ ಓದುವುದನ್ನು ಬಿಟ್ಟು, ಪೋಲನ ಬಳಿಗೆ ಬಂದು:—ಇನ್ನು ಟ್ರೇನು ಹೊರಡುವುದು. ಬಂಡಿಯಲ್ಲಿ ಕುಳಿತುಕೋ. ನಿನಗೆ ಹೇಳಬೇಕಾದುದೆಲ್ಲವನ್ನೂ ಹೇಳಿರುವೆನು. ಇನ್ನೇನೂ ಹೇಳುವ ಹಾಗಿಲ್ಲ. ನಿನ್ನೆದುರು ನಾನೊಪ್ಪಿಕೊಂಡಿರುವುದೆಲ್ಲ ನನಗೆ ನೆನಪಿದೆ. ನೀನು ತಲ್ಲಣಿಸಬೇಡ. ಜರ್ಮನ್ನ ಸಮ್ರಾಟರೊಡನೆ ನನಗೆ ಪರಿಚಯವಿದೆ. ಅವರನ್ನು ಕಂಡು, ಮಾತಾಡಿ, ನಾನು ನಿನ್ನನ್ನು ಬರ್ಲಿನ್ನಿನಲ್ಲಿಯೇ ಇರಗೊಡಲು ಪ್ರಯತ್ನಿಸುವೆನು. ಹಾಗಾದಲ್ಲಿ ನೀನು ಅಲ್ಲಿಯ ಕೆಲಸ ಮಾಡುತ್ತಿರಬಹುದು. ಇಲ್ಲಿಯ ಕೆಲಸವನ್ನು ನಿನ್ನ ಪತ್ನಿಯು ನೋಡಿಕೊಳ್ಳುವಳು; ಆಗಾಗ ನಿನ್ನ ಪತ್ನಿಯು ಬರ್ಲಿನ್ನಕ್ಕೆ ಬಂದು ನಿನ್ನನ್ನು ನೋಡಿಕೊಂಡು ಬರುವಳು.

ಆ ಮೇಲೆ ಪೋಲನು ಮಮತಾಪೂರ್ವಕವಾಗಿ ಬ್ಲೇಕನ ಕೈಕುಲುಕಿದನು. ಬಳಿಕ ಹೆಂಡತಿಯ ಕಡೆಗೆ ಕರುಣ ನೇತ್ರಗಳಿಂದ ನೋಡಿ:—ಪ್ರಿಯ ಮೆಡೆಲಿನಾ! ಈಗ ಹೋಗಿ ಬರುವೆನು.

ಮೆಡೆಲಿನ:—ವಿದಾಯ ಪ್ರಿಯತಮಾ! ಯುವತಿಯು ಕರವಸ್ತ್ರದಿಂದ ಕಂಬನಿಯನ್ನೊರೆಸಿಕೊಂಡಳು. ಪೋಲನು ಮೆಡೆಲಿನಳನ್ನು ಎದೆಗವಚಿಕೊಂಡು ಅವಳ ಮುಖಕ್ಕೆ ಮುತ್ತಿಟ್ಟನು. ತರುವಾಯ ತಡಮಾಡದೆ ಬಂಡಿಯೊಳಗೆ ಹೋಗಿ ಕುಳಿತನು. ಟ್ರೇನು ಹೊರಟಿತು.



## ಹೊಸ ಹಂಚಿಕೆ

ಪೋಲನು ಲಂಡನ್ನದ ಸುಖಮಯ ಗೃಹವನ್ನು ತ್ಯಜಿಸಿ, ಜರ್ಮನಿಯಲ್ಲಿ ನಿಂತು ಕಠೋರ ಸೈನಿಕ ವ್ರತವನ್ನು ಧಾರಣ ಮಾಡಿದನು. ಮೆಲ್ಲ ಮೆಲ್ಲನೆ ಮೂರು ತಿಂಗಳು ಸಂದಿತು. ಹಿಲ್ಡರ್ಸನ ದುಶ್ಚೇಷ್ಟೆಯಿಂದ ಅವನಿಗೆ ಬಹಳ ದಿನಗಳ ವರೆಗೆ ಬರ್ಲಿನ್ನಿನಲ್ಲಿರಲಾಗಲಿಲ್ಲ. ಫೆಬ್ರುವರಿ ತಿಂಗಳ ಆರಂಭದಲ್ಲಿಯೇ ಅವನಿಗೆ ಮೇಗಡೀವರ್ಗಕ್ಕೆ ಸ್ಥಾನಪಲ್ಲಟವಾಯಿತು.

ಫೆಬ್ರುವರಿ ತಿಂಗಳ ಅದೊಂದು ರಾತ್ರಿ. ಗದಗುಟ್ಟುವ ಚಳಿಯಿದ್ದಿತು. ಆ ಗಂಭೀರವಾದ ಇರುಳಿನಲ್ಲಿ ಅದಾವ ಮನುಷ್ಯರ ಸದ್ದೂ ಕೇಳಿಸುತ್ತಿರಲಿಲ್ಲ. ಅಂತಹ ವೇಳೆಯಲ್ಲಿ ಪೋಲನು ಏಕಾಕಿಯಾಗಿ ಹೆಗಲ ಮೇಲೆ ಬಂದೂಕನ್ನಿಟ್ಟುಕೊಂಡು ಮೇಗಡೀವರ್ಗದ ಕೋಟೆಯ ಹೊರಬಾಗಿಲಿನಲ್ಲಿ ಕಾವಲು ಮಾಡುತ್ತಿದ್ದನು.

ದುರ್ಗದ ಸಮೀಪದಲ್ಲಿಯೇ ಎಲ್ಬಾ ನದಿಯು ಹರಿಯುತ್ತಿದ್ದಿತು. ಪೋಲನು ಕ್ಷಣಕ್ಕೊಮ್ಮೆ ಆ ಕಡೆಗೆ ನೋಡುತ್ತಿದ್ದನು; ನಡುನಡುವೆ ತನ್ನ ಅದೃಷ್ಟವನ್ನು ನಿಂದಿಸಿಕೊಳ್ಳುತ್ತಿದ್ದನು. ಇದೇ ತೆರದಲ್ಲಿ ಅದೆಷ್ಟೋ ರಾತ್ರಿಗಳನ್ನವನು ಕಳೆಯಬೇಕಾಗಿದ್ದಿತು. ಮೊದಲಿನ ಸುಖವೂ ಆನಂದವೂ ವಿಲಾಸವೂ ಪ್ರಿಯಜನರ ಸಮ್ಮಿಲನವೂ ಅವನಿಗೆ ಕನಸಿನಂತೆ ತೋರತೊಡಗಿದುವು.

ಪೋಲನನ್ನು ಬರ್ಲಿನ್ನಿನಲ್ಲಿರಗೊಡಲು ಪ್ರಯತ್ನಿಸುವುದಾಗಿ ಬ್ಲೇಕನು ಮಾತು ಕೊಟ್ಟಿದ್ದನು; ಅದಕ್ಕಾಗಿ ಹೆಣಗುವುದರಲ್ಲಿ ಬ್ಲೇಕನು

ಔದಾಸೀನ್ಯವನ್ನು ತೋರಿಸಲಿಲ್ಲ; ಆದರೆ ಅವನ ಹೆಣಗಾಟವು ಫಲವಿಲ್ಲದಾಯಿತು. ಬರ್ಲಿನ್ನಿನ ಸೇನಾವಿಭಾಗದಲ್ಲಿ ಮೂರು ವಾರದ ವರೆಗೆ ಕೆಲಸ ಮಾಡಿದ ಬಳಿಕ ಪೋಲನು ಸ್ಪೆಡೆಲ ಎಂಬ ಸ್ಥಳಕ್ಕೆ ಕಳುಹಿಸಲ್ಪಟ್ಟನು. ಆ ನಂತರ ಅಲ್ಲಿಂದ ಮೇಗಡೀ ವರ್ಗಕ್ಕೆ ವರ್ಗಾಯಿಸಲ್ಪಟ್ಟನು. ಇನ್ನೂ ದೌರ್ಭಾಗ್ಯವೇನಂದರೆ, ಪೋಲನು ಕಾಲ್ದಂಡಿನಲ್ಲಿ ಕೆಲಸ ಮಾಡಬೇಕಿತ್ತು. ಹಿಲ್ಡರ್ಸನು ಅದೇ ರೆಜಿಮೆಂಟಿನ ಲೆಫ್ಟನೆಂಟನಾಗಿದ್ದ. ಹಾಗಾಗಿ ಪೋಲನು ಆತನ ಕೈಯೊಳಗಿನವನಾಗಿದ್ದ. ಹಿಲ್ಡರ್ಸನೇ ಪ್ರಯತ್ನಪಟ್ಟು ಅವನನ್ನು ತನ್ನ ಅಧೀನಸ್ಥನಾದ ಪಹರೆಯುವವನನ್ನಾಗಿ ನಿಯೋಜಿಸಿದ್ದನು.

ಪೋಲನು ತುಂಬಾ ಜಾಗರೂಕತೆಯಿಂದ ತನ್ನ ಕರ್ತವ್ಯವನ್ನು ಪಾಲಿಸುತ್ತಿದ್ದನು. ಹಿಲ್ಡರ್ಸನು ಯಾವಾಗಲೂ ಪೋಲನ ಹುಳುಕನ್ನು ಹುಡುಕುವುದರಲ್ಲೇ ಮಗ್ನನಾಗಿರುತ್ತಿದ್ದನು. ಹಿಲ್ಡರ್ಸನು ಸಿಟ್ಟಾದರೂ ಅಸಂತುಷ್ಟನಾದರೂ ಪೋಲನು ತುಂಬಾ ಧೀರತೆಯಿಂದದನ್ನು ಸಹಿಸಿಕೊಳ್ಳುತ್ತಿದ್ದನು. ಈ ರೀತಿ ಎಷ್ಟೆಷ್ಟು ಪ್ರಯತ್ನಪಟ್ಟರೂ ಪೋಲನನ್ನು ಹಿಲ್ಡರ್ಸನಿಂದ ಹಿಡಿಯಲಾಗಲಿಲ್ಲ; ಆದರೆ ಅಷ್ಟಷ್ಟೇ ಅವನ ಮೇಲಿನ ಆತನ ಕ್ರೋಧವು ಬೆಳೆಯುತ್ತಲೇ ಹೋಗುತ್ತಿದ್ದಿತು.

ಪೋಲನ ಸ್ವಂತದ ವಹಿವಾಟಿನ ಸ್ಥಿತಿಯು ತೀರ ಶೋಚನೀಯವಾಗಿದ್ದಿತು. ಆಗಾಗ ಒಂದೆರಡು ದಿವಸದ ರಜೆ ತೆಗೆದುಕೊಂಡು ಬರ್ಲಿನಕ್ಕೆ ಹೋಗಿಬರುವ ಮಾರ್ಗವನ್ನು ಹಿಲ್ಡರ್ಸನು ಕಟ್ಟುಮಾಡಿ ಬಿಟ್ಟಿದ್ದನು. ಅವನ ನಂಬುಗೆಯ ಪದಾಧಿಕಾರಿಯಾದ ಜೂಲಿಯುಸನ ಕೈಯಲ್ಲಿ ಪೋಲನ ವ್ಯವಹಾರದ ಭಾರವಿದ್ದಿತು. ಅವನು ಆಗಾಗ ಮೇಗಡೀ ವರ್ಗಕ್ಕೆ ಬಂದು ಪೋಲನನ್ನು ನೋಡಿ ಹೋಗುತ್ತಿದ್ದನು; ಹಾಗು ಅವಶ್ಯಕತಾನುಸಾರವಾಗಿ ಅವನ ಆಜ್ಞೆಯನ್ನು ಕೊಂಡು ಹೋಗುತ್ತಿದ್ದನು.

ಹೆಗಲ ಮೇಲೆ ಬಂದೂಕನ್ನಿಟ್ಟುಕೊಂಡು ಪೋಲನು ತನ್ನ ಭಾಗ್ಯವನ್ನು ಚಿಂತಿಸುತ್ತ ತನ್ನೊಳಗೇ ಹೇಳಿಕೊಂಡನು:—ಈಗ ನಾನು ನನ್ನ ಮನೆಗೊಂದು ಸಲ ಹೋಗಿದ್ದರೆ, ಒಮ್ಮೆ ಮೆಡೆಲಿನಳನ್ನು ನೋಡಲಾಗಿದ್ದರೆ ಬಹಳ ಸಂತಸವಾಗುತ್ತಿದ್ದಿತು; ಆದರೆ ಈ ಆಶೆಯು ನೆರವೇರಲಾರದು. ನಾನಿಲ್ಲದಿರುವಾಗ ಮೆಡೆಲಿನಳು ಸುಖದಿಂದಿರಬಹುದೇ? ಈ

...ಶಬ್ದ ರಾತ್ರಿಯಲ್ಲಿ ನಾನಾಕೆಯ ಸ್ಮರಣೆ ಮಾಡುತ್ತಿರುವೆನು. ಸುಖ ...ಂದ ಹಾಸುಗೆಯ ಮೇಲೆ ಪವಡಿಸಿರುವ ಮೆಡೆಲಿನಳೂ ಆಗಾಗ ನನ್ನ ನೆನಪು ಮಾಡುತ್ತಿರಬಹುದೇ? ಹಾಯ್! ಒಂದು ಸಾರಿ............

ಅಕಸ್ಮಾತ್ ಆದಾರದೋ ಕಾಲಿನ ಸಪ್ಪಳ ಕೇಳಿಸಿತು. ಪೋಲನಾಗ ಗಾಢ ಚಿಂತೆಯಲ್ಲಿ ತಲ್ಲೀನನಾಗಿದ್ದನು. ಅವನು ಆ ಸದ್ದನ್ನು ಕೇಳಲೂ ಇಲ್ಲ, ನಿಂತಲ್ಲಿಂದ ಕದಲಲೂ ಇಲ್ಲ.

ಸೈನಿಕ ಪುರುಷನೊಬ್ಬನು ಅವನೆದುರು ಬಂದು ನಿಂತುಕೊಂಡನು. ಈಗಾತನ ಮೇಲೆ ಪೋಲನ ಕಣ್ಣು ಬಿದ್ದಿತು. ಬೆಚ್ಚಿಬಿದ್ದನಾತ. ಬಂದೂಕನ್ನೆತ್ತಿಕೊಂಡು ಒಂದೆರಡು ಹೆಜ್ಜೆ ಮುಂಬಂದು ಆಗಂತುಕನನ್ನು ಕೇಳಿದನು:—ಹೂ ಕಮ್ಸ ದೇಅರ್?

ಆಗಂತುಕನು ತಟ್ಟನೆ ಸಾಂಕೇತಿಕ ಶಬ್ದವನ್ನುಚ್ಚರಿಸಿದನು. ಪೋಲನು ಬಂದೂಕನ್ನು ಕೆಳಗಿರಿಸಿದನು. ಪ್ರಕಾಶದಲ್ಲವನಿಗೆ ಆಗಂತುಕನ ಗುರತು ಹತ್ತಿತು. ಆತ ಲೆಪ್ಟನೆಂಟ ಹಿಲ್ಜರ್.

ಹಿಲ್ಜರ್ನು ಮಿಲಿಟರಿ ಕೋಟಿನಿಂದ ಮೈಯನ್ನು ಮುಚ್ಚಿಕೊಂಡು ತಲೆಯ ಮೇಲೆ ಬಿಳೀ ಟೊಪ್ಪಿಗೆಯನ್ನು ಹಾಕಿದ್ದನು. ಮೆಲ್ಲಮೆಲ್ಲನೆ ಆತನು ಬಾಗಿಲಿನೊಳಗೆ ಬಂದನು. ಅವನ ಮುಖವು ಗಂಭೀರವಾಗಿದ್ದು, ಮದ್ಯದ ಅಮಲಿನಿಂದ ಕಣ್ಣುಗಳು ಕೆಂಪಗಾಗಿದ್ದುವು. ಪೋಲನ ಬಳಿಗೆ ಬಂದು ತೀಕ್ಷ್ಣ ಸ್ವರದಲ್ಲಿ:—ಈ ರೀತಿ ನೀನು ಎಚ್ಚರದಪ್ಪಿರಲು ಕಾರಣ ವೇನು? ನಿಂತಲ್ಲಿಯೇ ನಿದ್ರಿಸುತ್ತಿದ್ದಂತೆ ಕಾಣುವುದು.

ಪೋಲನು ವಿನೀತಭಾವದಿಂದ:—ಇಲ್ಲ; ನಾನು ನಿದ್ರಿಸುತ್ತಿದ್ದಿಲ್ಲ.

ಹಿಲ್ಜರ್ನು ಉರಿದೆದ್ದು:—ಹಾಗಾದರೆ ನಾನು ಬರುತ್ತಲೆ ಕೂಗಲಿಲ್ಲವೇಕೆ?

ಪೋಲ—ನಿಮ್ಮನ್ನು ನೋಡುತ್ತಲೆ ನಾನು ನಿಮ್ಮ ಪರಿಚಯ ಕೇಳಿದೆನು.

ಹಿಲ್ಜರ್—ನನ್ನ ಮುಂದೀ ಠಕ್ಕುತನ ನಡೆಯದು. ನಿನ್ನ ಕರ್ತವ್ಯವನ್ನು ಪಾಲಿಸುವುದರಲ್ಲಿ ನೀನು ಅಲಕ್ಷ್ಯ ತೋರಿಸಿರುವುದನ್ನು ನಾನು ಸ್ವತಃ ನೋಡಿರುವೆನು. ಒಳ್ಳೇದು. ಈ ಸಾರೆಗೆ ನಾನು ನಿನ್ನ ಅಪರಾಧವನ್ನು ಕ್ಷಮಿಸುತ್ತೇನೆ; ಆದರೆ ಭವಿಷ್ಯದಲ್ಲಿ ಸಾವಧನಾಗಿರತಕ್ಕದ್ದು.

ಹೀಗೆಂದು ಹಿಲ್ಡರ್ಸನು ಹೋಗತೊಡಗುತ್ತಲೆ ಪೋಲನು:— ಹಿಲ್ಡರ್ಸ, ಒಂದು ಮಾತನ್ನು ಕೇಳಿ ಹೋಗು.

ಪೋಲನ ನುಡಿಯನ್ನು ಕೇಳಿ ಹಿಲ್ಡರ್ಸನು ಕೆರಳಿದ ಸಿಂಹನಂತೆ ತಿರುಗಿ ನಿಂತು:— ಏನು? ಇಷ್ಟು ಧೈರ್ಯವೇ! ನಿನ್ನ ಮೇಲಿನ ಅಧಿಕಾರಿ ಯನ್ನು ಇಂತಹ ಭಾಷೆಯಲ್ಲಿ ಸಂಬೋಧಿಸುತ್ತೀಯಾ?

ಪೋಲ— ಮಹಾಶಯ, ನನ್ನ ಅಪರಾಧವನ್ನು ಕ್ಷಮಿಸೋಣಾಗಲಿ. ನೀವು ನನ್ನ ಮೇಲಿನ ಆಫೀಸರರೆಂದು ನನಗೆ ಸ್ಮರಣೆಯಿದ್ದಿಲ್ಲ. ನೀವು ನನ್ನ ಒಂದೆರಡು ಮಾತುಗಳನ್ನು ಕೇಳಿ ಹೋಗುವಿರೇನು? ಸ್ವಲ್ಪ ಹೊತ್ತು ಪದವಿಯ ಧ್ಯಾನವಿಡದೆ, ನನ್ನ ಮಾತನ್ನು ಕೇಳೋಣಾಗಲಿ.

ಹಿಲ್ಡರ್ಸ— ನೀನು ತುಂಬಾ ಅವಿಧೇಯನು. ನಾನಿದನ್ನು ರಿಪೋರ್ಟ್ ಮಾಡುವೆನು. ಏನು ಹೇಳಲಿದೆ ನಿನಗೆ? ಸ್ವಲ್ಪದರಲ್ಲಿ ಹೇಳು. ನನ್ನ ಸಮ ಯವು ಅಮೂಲ್ಯವಾದುದು. ನಿನ್ನದೇನಾದರೂ ಅಭಿಯೋಗವಿದೆಯೇನು?

ಹಿಲ್ಡರ್ಸನು ಮೂರು-ನಾಲ್ಕಡಿ ಮುಂದೆ ಬಂದನು. ಪೋಲನು ತುಸು ಉತ್ತೇಜಿತಭಾವದಿಂದ:— ಒಂದಲ್ಲ, ಹಲವು ಅಭಿಯೋಗಗಳಿವೆ; ಆದರೆ ಈಗದೆಲ್ಲವನ್ನೂ ಹೇಳುವ ಅಗತ್ಯವಿಲ್ಲ. ನನ್ನ ಮೇಲೆ ನೀನೆಷ್ಟು ದಯಾಳುವಾಗಿರುವಿಯೆಂಬದು ನಿನಗೆ ಗೊತ್ತಿಲ್ಲದಿಲ್ಲ; ಹೀಗಂತೂ ಮೊದ ಲೆಂದೂ ನೀನು ನನ್ನಲ್ಲಿ ಪ್ರಸನ್ನನಾಗಿರಲಿಲ್ಲ; ಆದರೆ ಪೈತೃಕ ಸಂಪತ್ತು ನನಗೆ ದೊರೆತಂದಿನಿಂದ ನನ್ನ ಮೇಲಿನ ನಿನ್ನ ದ್ವೇಷವು ನೂರ್ಮಡಿ ಮಿಗಿ ಲಾಗಿದೆ. ನನ್ನನ್ನು ಸರ್ವನಾಶಗೊಳಿಸಲು ನೀನು ಟೊಂಕಕಟ್ಟಿ ನಿಂತಿ ರುವೆ. ನಾನು ಎಚ್ಚರಿಕೆಯಿಂದಿದ್ದುದರಿಂದಲೇ ನಿನಗಿಷ್ಟರ ವರೆಗೆ ನನ್ನ ಸರ್ವನಾಶ ಮಾಡಲಾಗಲಿಲ್ಲ; ಆದರೆ ಇನ್ನು ಎಂದಿನ ತನಕ ನೀನು ನನ್ನ ಸರ್ವನಾಶಕ್ಕೆ ಪ್ರಯತ್ನಿಸುತ್ತಲಿರುವಿ?

ಹಿಲ್ಡರ್ಸ— ನನಗೆ ಇಚ್ಛೆಯಿರುವ ತನಕ; ಆದರೆ ನೀನು ಮೇಲಿ ನವರಿಗೆ ನಿರಾದರ............

ಅವನ ಮಾತನ್ನು ತಡೆದು ಪೋಲನು:— ಅದನ್ನು ನಾನು ಬಲ್ಲೆ; ಆದರೆ ಹಿಲ್ಡರ್ಸ, ಸರಕಾರೀ ನೌಕರಿಯ ಲೆಕ್ಕದಿಂದ ನೀನು ನನ್ನ ಮೇಲಿ ನವನಾದರೂ ಇನ್ನೊಂದು ಬಗೆಯಿಂದ ನಾನು ನಿನಗೆ ಸರಸಮಾನನೆಂಬು

ನನ್ನು ನೀನು ತಿಳಿದುಕೊಳ್ಳಬೇಕು. ನೀನು ನನ್ನ ಅತ್ತೆಯ ಮಗನು, ಇದು ಮರೆಯುವ ಮಾತಲ್ಲ. ಹೀಗಿರುವಾಗ, ನೀನು ನನ್ನ ಮೇಲಿನ ದ್ವೇಷವನ್ನು ಮರೆಯುವುದುಚಿತವಲ್ಲವೆ?

ಹಿಲ್ಡರ್ಸನು ತಲೆಯನ್ನಲ್ಲಾಡಿಸುತ್ತ:— ಇಲ್ಲ, ನನ್ನಿಚ್ಛೆ ಹಾಗಿಲ್ಲ. ನಾನು ಜೀವಂತನಾಗಿರುವ ತನಕ ನಿನ್ನನ್ನು ಹಗೆಯಾಗಿ ತಿಳಿಯುತ್ತಲಿರುವೆನು. ನಿನ್ನೊಂದಿಗೆ ಗೆಳೆತನದಿಂದಿರುವುದರಿಂದ ನನಗೆ ಲಾಭವಾದರೂ ಏನಿದೆ?

ಪೋಲ— ಏನಾದರೂ ಲಾಭದ ಭರವಸೆ ತೋರಿದರೆ, ಆಗಲೂ ನೀನು ನಿನ್ನ ಭಾವವನ್ನು ಬದಲಿಸಲಾರೆಯಾ?

ಹಿ— ನೀನು ನನಗೆ ಲಂಚದ ಲೋಭ ತೋರಿಸುತ್ತಿರುವೆಯಾ?

ಪೋಲ— ಹೂಂ, ನೀನಿದನ್ನು ಲಂಚವೆಂದೆಣಿಸುವಿಯಾದರೆ ನನ್ನದೇನೂ ಅಡ್ಡಿಯಿಲ್ಲ. ನಿನ್ನಲ್ಲಿ ನನಗೆ ಸೋದರಸಂಬಂಧವಿದೆ. ನೀನು ದುಷ್ಟ ಸಂಗದಲ್ಲಿ ಬಿದ್ದು ಹಾಳಾಗಿ ಹೋಗಬೇಕೆಂದು ನಾನೆಳಸುವುದಿಲ್ಲ. ಜೂಜಾಡುವುದನ್ನೂ, ಮಿತಿಮೀರಿ ಮದ್ಯಸೇವಿಸುವುದನ್ನೂ ಬಿಟ್ಟುಬಿಡು. ಅಧಿಕ ವೆಚ್ಚದಿಂದಲೂ ಉಚ್ಛೃಂಖಲತೆಯಿಂದಲೂ ದೂರವಿರು. ಒಂದು ವೇಳೆ ನೀನೀ ಪ್ರಸ್ತಾಪಗಳನ್ನೆಲ್ಲ ಒಪ್ಪುವಿಯಾದರೆ ಮತ್ತು ಭವಿಷ್ಯದಲ್ಲಿ ನನಗೆ ನಷ್ಟವನ್ನುಂಟುಮಾಡುವ ಪ್ರಯತ್ನವನ್ನು ತ್ಯಜಿಸುವುದಾದರೆ, ನಾನು ನಿನಗೆ ವರ್ಷಕ್ಕೆ ಆರು ಸಾವಿರ ರೂಪಾಯಿಗಳನ್ನು ಕೊಡಲು ಸಿದ್ಧನಿರುವೆನು.

ಹಿಲ್ಡರ್ಸನು ಒಣನಗೆಯನ್ನುನಕ್ಕು:— ದೊಡ್ಡ ದಾನಿಯಿರುವೆ ನೀನು! ಆದುದರಿಂದಲೇ ಆರು ಸಾವಿರ ವಾರ್ಷಿಕವನ್ನು ದೊಡ್ಡ ದಾನವೆಂದು ತಿಳಿಯುತ್ತೀ.

ಪೋಲ— ಇಷ್ಟರಿಂದ ನಿನಗೆ ತೃಪ್ತಿಯಿಲ್ಲವಾದರೆ ಹೆಚ್ಚಿಗೆ ಕೊಡಲೂ ಸಿದ್ಧನಿರುವೆನು.

ಹಿಲ್ಡರ್ಸ— ನೀನೀ ರೀತಿ ಕಲ್ಪವೃಕ್ಷನಾಗುವ ಅಗತ್ಯವಿಲ್ಲ. ನಾನು ನಿನ್ನಿಂದ ಕುರುಡು ಕಾಸನ್ನೂ ಅಪೇಕ್ಷಿಸುವುದಿಲ್ಲ ನನ್ನ ಹತ್ತಿರ ಹಣಕ್ಕೆ ಕೊರತೆಯಿಲ್ಲ. ನೀನು ಅದಾವ ಧನವನ್ನು ಹೊಂದಿ ಇಷ್ಟು ದೊಡ್ಡ ದಾನಿಯಾಗಿರುವೆಯೋ, ಆ ಧನವು ಎಂದಾದರೂ ನನ್ನ ಕೈಗೇ ಬರು

ವುದು; ಅದಕ್ಕಾಗಿಯೇ ನಾನು ಯತ್ನಿಸುತ್ತಿದ್ದೇನೆ. ಅದರ ದೆಸೆಯಿಂದ ಒಂದು ವೇಳೆ ಅಗತ್ಯವಿದ್ದರೆ, ನಿನ್ನನ್ನು ಕೀಟಕ-ಪತಂಗದಂತೆ ಹಿಚುಕಿ ಸಹ ಹಾಕುವೆನು.

ಇದಕ್ಕುತ್ತರವಾಗಿ ಪೋಲನು ಏನು ಹೇಳುವನೆಂಬುದನ್ನು ಕಿವಿಗೊಡದೆ ಹಿಲ್ಡರ್ಸನು ಒಡನೆ ಅಲ್ಲಿಂದ ಹೊರಟು ಹೋದನು. ಇಂಗ್ಲಂಡವನ್ನು ಬಿಡುವ ಮೊದಲು ಪೋಲನು ತನ್ನ ಸಮಸ್ತೈಶ್ವರ್ಯವನ್ನು ಹೆಂಡತಿಯ ಹೆಸರಿಗೆ ಬರೆದು ಹಾಕಿದ್ದನು. ಇಂತಹ ಸ್ಥಿತಿಯಲ್ಲಿ ಹಿಲ್ಡರ್ಸನು ಅದಾವ ವಿಧದಿಂದ ತನ್ನ ಧನವನ್ನು ಅಪಹರಿಸಿಯಾನೆಂದು ಅವನು ತಿಳಿಯಲಾರದಾದನು. ಪೋಲನು ಅನ್ಯಮನಸ್ಕಭಾವದಿಂದ ಅನೇಕ ತರದ ಮಾತುಗಳನ್ನು ಚಿಂತಿಸುತ್ತಿದ್ದನು. ಅಷ್ಟರಲ್ಲಿ ಓರ್ವ ಜರ್ಮನ್ನ ಪುರುಷನು ಆತನ ಮುಂದೆ ಬಂದು ಆದರಪೂರ್ವಕವಾಗಿ ಅಭಿವಾದನೆ ಮಾಡಿ ನಿಂತುಕೊಂಡನು.

ಪೋಲನು ಪ್ರಶ್ನಿಸಿದನು:—ಯಾರು? ಜೂಲಿಯುಸನೇ? ಈಗ ಇಲ್ಲಿಗೆ ಹೇಗೆ ಬಂದೆ? ಏನು ಸುದ್ದಿ?

ಜೂಲಿಯುಸ:—ವಿಶೇಷ ಕೆಲಸದಿಂದ ಈಗ ಬರಬೇಕಾಗಿ ಬಂದಿತು.

ಪೋಲ—ಹೊಸದೇನಾದರೂ ಕಂಟ್ರಾಕ್ಟ ತೆಗೆದುಕೊಳ್ಳಲಿಚ್ಛಿಸುತ್ತೀಯೇನು?

ಜೂಲಿಯುಸ—ನನ್ನಿಚ್ಛೆಯೇನೋ ಹಾಗೆಯೇ ಇದೆ. ನಿಮಗೆ ತೋರಿಸುವುದಕ್ಕಾಗಿ ಬರುತ್ತಾ ಲೆಕ್ಕವನ್ನೂ ತಂದಿರುವೆನು.

ಜೇಬಿನಿಂದ ಕಾಗದ-ಪತ್ರಗಳನ್ನು ತೆಗೆಯುತ್ತ ಜೂಲಿಯುಸನು ಮತ್ತೆ:— ಎಸೆನದ ಕಾರಖಾನೆಯವನು ಪತ್ರಿಕೆಯಲ್ಲೊಂದು ಕಂಟ್ರಾಕ್ಟಿಗಾಗಿ ವಿಜ್ಞಾಪನೆ ಕೊಟ್ಟಿರುವನು. ಕಂಟ್ರಾಕ್ಟರುಗಳು ಟೆಂಡರ ಸಹಿತ ಆವೇದನ ಪತ್ರ ಕಳುಹಿಸಬೇಕೆಂದು ಬರೆದಿರುವನು. ನಾನು ಲೆಕ್ಕ ಹಾಕಿ ನೋಡಿರುವೆನು. ಈ ಕಂಟ್ರಾಕ್ಟದಲ್ಲಿ ದೊಡ್ಡ ಲಾಭವಿದೆ. ನಾಡದಿನೊಳಗೆ ಟೆಂಡರ ದಾಖಲಾಗಬೇಕು. ಆದುದರಿಂದ ಕಾಗದ-ಪತ್ರಗಳನ್ನು ನೋಡಿ ಕೂಡಲೆ ನಿಮ್ಮ ಸಲಹೆ ಕೊಡಿರಿ. ಎಸ್ಟಿಮೇಟನ್ನೂ ತಯಾರಿಸಿ, ನಿಮಗೆ ತೋರಿಸಲು ತಂದಿರುವೆನು. ಹೀಗೆಂದು ಜೂಲಿಯುಸನು ಬ್ಯಾಗಿನಿಂದ ಕಾಗದದ ಕಟ್ಟೊಂದನ್ನು ತೆಗೆದು ಪೋಲನಿಗೆ ಕೊಟ್ಟನು.

ಪೋಲನು ಹೇಳಿದನು:—ಈ ದಿನ ರಾತ್ರಿಯಂತೂ ನಾನಿಷ್ಟು ಕಾಗದ ಗಳನ್ನು ನೋಡಲಾರೆನು.

ಜೂಲಿಯಸ—ಹಾಗೆಂದೇ ನಾನು 'ಎಲವಾ' ಹೋಟೆಲಿನಲ್ಲಿ ನಿಂತಿರು ವೆನು.

ಪೋಲ:—ವಿಹಿತ ಮಾಡಿದೆ. ಸಮಯ ಸಿಗುತ್ತಲೆ ಎಸ್ಟಿಮೇಟನ್ನು ನೋಡಿ ನನ್ನ ವಿಚಾರವನ್ನು ನಿನಗೆ ಹೇಳುವೆನು. ನೀನದರಲ್ಲಿ ಒಳ್ಳೆಯ ಲಾಭವಿದೆಯೆಂದು ತಿಳಿದಿರುವಾಗ, ನನ್ನ ಸಲಹೆಯು ನಿನಗನುಕೂಲ ವಾಗಿಯೇ ಇರುವ ಸಂಭವವಿದೆ. ಆದರೂ ಕೆಲಸ ಬಹಳ ದೊಡ್ಡದಾದು ದರಿಂದ ಆಲೋಚನೆ ಮಾಡಿಯೇ ಸಲಹೆ ಈಯುವುದು ಒಳ್ಳೆಯದು. ನಾಳೆ ಹನ್ನೆರಡು ತಾಸಿಗೆ ನೀನಿಲ್ಲಿಗೆ ಬಾ. ಅಷ್ಟರಲ್ಲಿ ನನಗೆ ಕೆಲಸದಿಂದ ಬಿಡುವು ದೊರೆಯುವುದು; ಆಗ ನಿನಗೆ ಕಾಗದ-ಪತ್ರಗಳನ್ನು ಹಿಂದಿರುಗಿ ಕೊಡುವೆನು. ಇರಲಿ. ಈಗ ಕೆಲಸ ಹೇಗೆ ನಡೆಯುತ್ತಿದೆ?

ಜೂಲಿಯಸ—ಮಧ್ಯದಲ್ಲಿ ಸ್ವಲ್ಪ ಕೆಟ್ಟಿದ್ದಿತು; ಆದರೆ ಈಗ ಚೆನ್ನಾ ಗಿದೆ ಬರುವ ತಿಂಗಳಿಗೆ ಇನ್ನೂ ಒಳ್ಳೆಯ ಸ್ಥಿತಿಗೆ ಬಂದೀತೆಂಬ ಆಶೆಯಿದೆ. ನಾನಿರುವ ತನಕ ನೀವು ಯಾವುದಕ್ಕೂ ಚಿಂತಿಸಬೇಕಾದುದಿಲ್ಲ.

ಪೋಲ—ನಿನ್ನ ಮಾತನ್ನು ಕೇಳಿ ನಾನು ತುಂಬಾ ಸಂತುಷ್ಟನಾದೆ.

ಜೂಲಿಯಸ—ಒಳ್ಳೇದು. ಈಗ ನನಗೆ ಅಪ್ಪಣೆ ಕೊಡಿರಿ.

ಬಳಿಕ ಜೂಲಿಯಸನು ಪೋಲನನ್ನಭಿವಂದಿಸಿ ಹೊರಟು ಹೋದನು. ಪೋಲನು ಪುನಃ ಹೆಗಲ ಮೇಲೆ ಬಂದೂಕಿಟ್ಟುಕೊಂಡು ತಿರುಗತೊಡ ಗಿದನು.

ಬಾಗಿಲನ್ನು ದಾಟುವಾಗ ಹಿಲ್ಡರ್ಸನು ಜೂಲಿಯಸ ಬರುವುದನ್ನು ನೋಡಿದ್ದನು. ಆದಕಾರಣ ಅಲ್ಲಿಯೇ ಅಡಗಿ ನಿಂತು, ಆ ಇಬ್ಬರ ಮಾತುಗಳನ್ನೂ ಕೇಳುತ್ತಿದ್ದನು. ಎಲ್ಲ ಮಾತುಗಳನ್ನೂ ಆಲಿಸಿದ ತರು ವಾಯ ಆತನಿಗೊಂದು ಯುಕ್ತಿ ಹೊಳೆಯಿತು. ಪೋಲನ ಸರ್ವನಾಶ ಕ್ಕಾಗಿ ಆತನು ಅದಾವ ಹಂಚಿಕೆಯನ್ನು ಯೋಚಿಸಿದ್ದನೋ, ಅದರ ಕಲ್ಪನೆಯನ್ನು ಸೈತಾನನು ಸಹ ಮಾಡಿಯಾನೋ, ಮಾಡಲಾರನೋ

ಸಂದೇಹವಿದೆ. ತನ್ನ ಸಂಕಲ್ಪವು ಕಾರ್ಯರೂಪದಲ್ಲಿ ಪರಿಣತವಾದಲ್ಲಿ ಪೋಲನ ಸರ್ವನಾಶವು ಅವಶ್ಯ ಸಂಭಾವ್ಯವೆಂದು ಹಿಲ್ಬರ್ಸನು ಬಗೆದನು.

ಸ್ವಲ್ಪ ಸಮಯದ ನಂತರ ಪ್ರಸನ್ನ ಚಿತ್ತದಿಂದ ಗೊಣಗುಟ್ಟುತ್ತ ಹಿಲ್ಬರ್ಸನು ಪೋಲನೆದುರಿನಿಂದ ಹೊರಟು ಹೋದನು.

ಹಿಲ್ಬರ್ಸನು ಕೋಟೆಯೊಳಗೆ ಹೋಗಿದ್ದನೆಂದೂ, ಅಲ್ಲಿಯ ಕೆಲಸ ತೀರಿಸಿಕೊಂಡು ಈಗ ನಗರಕ್ಕೆ ಹೋಗುತ್ತಿದ್ದಾನೆಂದೂ ಪೋಲನೂಹಿಸಿದನು. ಆತನು ತಮ್ಮ ಮಾತೆಲ್ಲವನ್ನೂ ಕೇಳಿರಬಹುದೆಂಬ ಅನುಮಾನ ಸಹ ಪೋಲನಿಗಾಗಲಿಲ್ಲ. ಅವನು ತನ್ನೊಳಗೇ ಹೇಳಿಕೊಂಡನು:—ಹಿಲ್ಬರ್ಸನಿಷ್ಟೇಕೆ ಹರ್ಷಿತನಾಗಿರುವನು? ಜೂಜಾಡಲು ಎಲ್ಲೋ ಸಾಲವಾಗಿ ರೂಪಾಯಿಗಳು ಸಿಕ್ಕಿರಬೇಕೆಂದು ತೋರುವುದು. ಹೇ, ಪರಮಾತ್ಮಾ! ನೀನೀ ಅಭಾಗ್ಯನಿಗೆ ಸುಬುದ್ಧಿ ಕೊಡಲಾರೆಯಾ?

ಅದೇ ಸಮಯದಲ್ಲಿ ಹಿಲ್ಬರ್ಸನು ಮಾರ್ಗದಲ್ಲಿ ಹೋಗುತ್ತ ಯೋಚಿಸುತ್ತಿದ್ದನು:—ಈ ಸಾರೆ ಪೋಲನ ಉದ್ಧಾರವಾಗದು ಎರಡು-ಮೂರು ದಿನಗಳಲ್ಲಿಯೇ ಅವನನ್ನು ಪುಡಿಗೆಯ್ಯುವೆನು.

## ಗುಪ್ತ ಪರಾಮರ್ಶ

ಕತ್ತಲೆಯ ದಾರಿಯಲ್ಲಿ ಹಿಲ್ಬರ್ಸನು ತ್ವರೆಯಿಂದ ಮುನ್ನಡೆಯುತ್ತಿದ್ದನು. ಮಂಜು ಬೀಳುತ್ತಿದ್ದಿತು. ಹಾದಿ ನಡೆಯುವದು ತೀರ ಕಷ್ಟಕರವಿದ್ದಿತು. ಜನರು ಮನೆಯಿಂದ ಹೊರಹೊರಡುವುದೇ ದುಸ್ತರವಾಗಿದ್ದಿತು; ಆದರೆ ಈ ಅನಾನುಕೂಲತೆಗಳ ಕಡೆಗೆ ಹಿಲ್ಬರ್ಸನ ಗಮನವೇ ಇದ್ದಿಲ್ಲ. ಪೋಲನ ಸರ್ವನಾಶದ ಭೀಷಣ ಪೈಶಾಚಿಕ ಸಂಕಲ್ಪವು ಆತನ ಹೃದಯದಲ್ಲಿ ತಾಂಡವವಾಡುತ್ತಿದ್ದಿತು.

ಆಗ ರಾತ್ರಿಯ ಹತ್ತು ತಾಸಿನ ಸಮಯ. ಹಿಲ್ಬರ್ಸನು ಒಂದು ಕಗ್ಗತ್ತಲೆಯ ಬೀದಿಯಲ್ಲಿ ಹೋಗಿ ನಿಂತುಕೊಂಡು ಒಮ್ಮೆ ಸುತ್ತಲೂ ನಿಟ್ಟಿಸಿ ನೋಡಿದನು. ಎತ್ತಲೂ ಯಾರೂ ಕಾಣಿಸಲಿಲ್ಲ. ಜೇಬಿನಿಂದ ಕೃತಕ ಮೀಸೆಯನ್ನು ಹೊರತೆಗೆದು ಇಟ್ಟುಕೊಂಡನು. ಜರ್ಮನಿಯ ಸಮರ ವಿಭಾಗದ ಅನೇಕ ಉದ್ಯೋಗಸ್ಥರು ಕೃತ್ರಿಮ ವೇಷವನ್ನು ಧರಿ

ಸುವ ಅಭಿಪ್ರಾಯದಿಂದ ಈ ಮೀಸೆಯನ್ನು ಉಪಯೋಗಿಸುತ್ತಿದ್ದರು. ಕೃತಕ ಮೀಸೆಯಿಂದ ಹಿಲ್ಡರ್ಸನ ರೂಪವು ಬದಲಾಯಿತು. ಈಗಾತನನ್ನು ಗುರತಿಸುವುದು ಪರಿಚಿತರಾದವರಿಗೂ ಕೂಡ ಕಠಿಣವಾಗಿದ್ದಿತು.

ಈ ರೀತಿ ಸುಸಜ್ಜಿತನಾಗಿ ಹಿಲ್ಡರ್ಸನು ಆ ನಿಃಶಬ್ದ ವೀಥಿಯಿಂದ ಕೋಲಾಹಲಪೂರ್ಣವಾದ ರಸ್ತೆಗೆ ಬಂದನು. ಆ ಮೇಲೆ ನದೀ ತೀರದಿಂದಲೇ 'ಕಾಫ ಫ್ರೂಸಿ' ಎಂಬ ಹೋಟೆಲ್ಲಿಗೆ ತೆರಳಿದನು. ಹಲವು ರಾಜಕರ್ಮಚಾರಿಗಳು ರಾತ್ರಿಗಲ್ಲಿ ಊಟಮಾಡಲು ಬರುತ್ತಿದ್ದರು.

ಅಧಿಕಾಂಶ ಕೋಣೆಗಳಲ್ಲಿ ಜನರ ದೊಡ್ಡ ಸಂದಣಿಯಿದ್ದಿತು; ಕೇವಲ ಒಂದು ಕೋಣೆಯಲ್ಲಿ ಇಬ್ಬರು ಜನರು ಮಾತ್ರ ಕುಳಿತು ಮದ್ಯಪಾನ ಮಾಡುತ್ತಿದ್ದರು. ಇಬ್ಬರೂ ಅಲ್ಪವಯಸ್ಕರಾಗಿದ್ದು, ನೋಡಲು ಕೂಲಿಕಾರರಂತೆ ತೋರುತ್ತಿದ್ದರು; ಆದರೆ ವಾಸ್ತವದಲ್ಲವರು ಕೃತ್ರಿಮ ವೇಷಧಾರಿಗಳಾದ ರಷ್ಯಾದ ಬೇಹುಗಾರರಾಗಿದ್ದರು. ಅವರಲ್ಲೊಬ್ಬನ ಹೆಸರು ಸಾರ್ಜ, ಇನ್ನೊಬ್ಬನ ಹೆಸರು ಅಲೆಕ್ಸಿಸ್. ಕಳೆದೆರಡು ತಿಂಗಳುಗಳಿಂದ ಅವರಿಬ್ಬರೂ ಕೃತಕ ವೇಷದಲ್ಲಿ ಮೆಗಡೀವರ್ಗ ನಗರದಲ್ಲಿ ವಾಸಿಸುತ್ತಿದ್ದರು. ಕೆಲ ವಾರಗಳಿಂದ ಅವರಿಗೆ ಹಿಲ್ಡರ್ಸನ ಪರಿಚಯವಾಗಿದ್ದಿತು. ಹಿಲ್ಡರ್ಸನು ವೇಷ ಪಲ್ಲಟದಿಂದ ಆಗಾಗ ಅವರಿಗೆ ಸಿಗುತ್ತಿದ್ದನು; ಆದರೆ ತನ್ನ ನಿಜವಾದ ಪರಿಚಯವನ್ನವರಲ್ಲಿ ಮರೆಮಾಜಿದ್ದನು. ಇಂದೂ ಸಹ ಹಿಲ್ಡರ್ಸನು ಹೋಟೆಲವನ್ನು ತಲುಪಿ ನೆಟ್ಟಗೆ ಅವರೀರ್ವರ ಹತ್ತಿರವೇ ಹೋಗಿ ಕುಳಿತು:—ಇವತ್ತೊಂದು ಸುವಾರ್ತೆಯಿದೆ; ಬಲೆಯು ಸಿದ್ಧವಾಗಿದೆ, ಎಂದು ನುಡಿದನು.

ಒಬ್ಬ ಬೇಹುಗಾರ—ಆಗಲಿ. ಇಷ್ಟು ದಿನಗಳ ಮೇಲೆ ತುಸುವಾದರೂ ಆಶೆ ಹುಟ್ಟಿತು.

ಇನ್ನೊಬ್ಬ ಬೇಹುಗಾರ:—ಆಶೆಯಲ್ಲಿಯೇ ಅಲೆಯುತ್ತ ಅಲೆಯುತ್ತ ನಾವು ನಿರಾಶರಾಗಿ ಹೋದೆವು. ಇನ್ನು ನಾವಿಲ್ಲಿ ಹೆಚ್ಚು ಕಾಲ ಕಳೆಯುವುದಿಲ್ಲ. ಯಾವಾಗ ಯಾವ ವಿಪತ್ತು ಬರುವದೋ ಹೇಳುವವರಾರು? ನಮ್ಮ ಮೇಲೆ ಪೋಲೀಸರ ಕಣ್ಣು ಬಿದ್ದಾಗಿದೆ. ಅವರು ನಮ್ಮಲ್ಲಿ ಸಂಪೂರ್ಣ ದೃಷ್ಟಿಯಿಟ್ಟಿದ್ದಾರೆ.

ಹಿಲ್ಡರ್ಸ—ಇದರಿಂದ ಭಯವೇನು? ಅಷ್ಟು ತ್ವರಿತವೇನೂ ಇಲ್ಲ. ನಿಮ್ಮ ಕಾರ್ಯವು ಶೀಘ್ರವಾಗಿಯೇ ಕೊನೆಗೊಳ್ಳುವುದು. ಆಗ ನೀವು

ತೊಂದರೆಯಿಲ್ಲದೆ ಪೋಲೀಸರ ದೃಷ್ಟಿಯಿಂದ ಪಾರಾಗುವಿರಿ. ಇಷ್ಟು ದಿನಗಳಿಂದ ನಾನು ಸುಯೋಗವನ್ನು ಕಾಯುತ್ತಿದ್ದೆನು; ಆದರೆ ಈ ವರೆಗದು ಸಿಗಲಿಲ್ಲ. ಈಗ ಒಂದು ತಾಸಾಯಿತು, ಕಾರ್ಯಸಿದ್ಧಿಯ ಸುಯೋಗ ದೊರೆತಿದೆ.

ಸಾರ್ಜ—ಬರ್ಲಿನದಿಂದಿಲ್ಲಿಗೆ ಬರಲಿದ್ದ ಮನುಷ್ಯನು ಬಂದನೇ?

ಹಿಲ್ಡರ್ಸ—ಹೌದು. ಇವತ್ತು ರಾತ್ರಿ ಬಂದನು. ಇದುವರೆಗೆ ಅವನು ಬರದಿದ್ದುದರಿಂದಲೇ ಇಷ್ಟು ವಿಲಂಬವಾಯಿತು. ನನ್ನ ಕಡು ವೈರಿಯಾದ ಪೋಲನ ವಿಷಯವನ್ನು ಮೊದಲೇ ನಾನು ನಿಮ್ಮೊಡನೆ ಹೇಳಿರುವೆನು. ಬರ್ಲಿನದಿಂದ ಬಂದಿರುವ ಆತನ ಕಡೆಯುವನು ಪೋಲನಿಗೆ ತೋರಿಸಲೋಸುಗ ಕೆಲವು ಕಾಗದ-ಪತ್ರಗಳನ್ನು ತಂದಿರುವನು. ಅವನ್ನೆಲ್ಲ ಒಂದು ಚಿಕ್ಕ ಬ್ಯಾಗಿನಲ್ಲಿಟ್ಟು ಪೋಲನಿಗವುಗಳನ್ನು ನೋಡಲು ಕೊಟ್ಟಿರುವನು. ನಾಳೆ ಹನ್ನೆರಡು ತಾಸಿಗೆ ಆ ಕಾಗದಗಳಾತನಿಗೆ ಮರಳಿ ಸಿಗುವವು. ಆ ಮನುಷ್ಯನ ಹೆಸರು ಜೂಲಿಯಸನೆಂದು. ಜೂಲಿಯಸನು ಆ ಕಾಗದಗಳನ್ನು ತೆಗೆದುಕೊಳ್ಳಲು ನಾಳೆ ದುರ್ಗದೊಳಗೆ ಹೋಗುವನು. ಅವುಗಳನ್ನು ತೆಗೆದುಕೊಂಡ ಬಳಿಕ ಆತ ಎಲವಾ ಹೋಟೆಲ್ಲಿಗೆ ಹೋಗುವನು. ಅಲ್ಲಿಯೇ ಆತ ತಂಗಿರುವನು. ಅದೇ ಹೋಟೆಲ್ಲಿನಲ್ಲಾಗಲಿ. ಬೇರೆ ಹೋಟೆಲ್ಲಿನಲ್ಲಾಗಲಿ ಊಟ ಮಾಡಿ ಮೂರು ಗಂಟೆಯ ಬಂಡಿಯಿಂದಾತನು ಬರ್ಲಿನಕ್ಕೆ ಹೊರಡುವನು. ನನ್ನ ಮಾತು ತಿಳಿಯಿತಲ್ಲವೆ?

ಅಲೆಕ್ಸ್ಸ—ಇದರಲ್ಲಿ ತಿಳಿಯಲಾಗದ ಮಾತೇನಿದೆ? ನಾವೀಗ ಮಾಡಬೇಕಾದುದೇನೆಂಬುದನ್ನು ತಿಳಿಸು.

ಹಿಲ್ಡರ್ಸನೊಮ್ಮೆ ಸುತ್ತಲೂ ನೋಡಿದನು. ಎಲ್ಲೆಲ್ಲಿಯೂ ನಿಃಶಬ್ದತೆಯನ್ನೀಕ್ಷಿಸಿ ಕಿಸೆಯಿಂದೊಂದು ಲಕ್ಕೋಟೆಯನ್ನು ಹೊರತೆಗೆದು, ಅಲೆಕ್ಸ್ಸನಿಗಿತ್ತು—ಇದನ್ನು 'ತುಂಬಾ ಜೋಪಾನದಿಂದಿಟ್ಟುಕೊಳ್ಳಿರಿ. ಇದರಲ್ಲಿ ಮೇಗಡೀವರ್ಗದ ಕೋಟೆಯ ನಕ್ಷೆಯಿದೆ.

ಇಬ್ಬರೂ ವ್ಯಗ್ರಭಾವದಿಂದ:—ಕೋಟೆಯ ನಕ್ಷೆಯೆ? ಅದನ್ನೇ ನಾವಾದರೂ ಅಪೇಕ್ಷಿಸಿದ್ದೆವು.

ಹಿಲ್ಡರ್ಸ—ರಷ್ಯಾ ಸರಕಾರಕ್ಕಾಗಿ ನೀವದಾವ ನಕ್ಷೆಯನ್ನಪೇಕ್ಷಿಸಿದ್ದಿರೋ, ಅದೇ ನಕ್ಷೆಯು ಈ ಲಕ್ಕೋಟೆಯೊಳಗಿದೆ; ಆದರೆ ಈ ನಕ್ಷೆ ಸಿಕ್ಕಿದ ಮಾತ್ರದಿಂದ ನೀವು ಹೊರಡಲಿಚ್ಛಿಸುವುದಾದರೆ, ಸಂಕಟಕ್ಕೆ ಗುರಿಯಾಗುವಿರಲ್ಲದೆ ನಾನೂ ಕಷ್ಟಕ್ಕೆ ಬೀಳಬೇಕಾಗುವುದು. ನೀವೀಗ ಎಲ್ಲೆಡೆಯಿಂದಲೂ ರಕ್ಷಣೆಯಾಗಿ, ನನ್ನ ಹಗೆಯೂ ನಾಶವಾಗುವಂತಹ ಕೆಲಸವನ್ನು ಮಾಡಬೇಕಾಗುವುದು. ಈ ದಿನ ರಾತ್ರಿಯೇ ನೀವೀ ನಕ್ಷೆಯ ಪ್ರತಿಯೊಂದನ್ನು ತೆಗೆದು, ಅಸಲು ನಕ್ಷೆಯನ್ನು ನಿಮ್ಮ ಹತ್ತಿರ ಇಟ್ಟುಕೊಳ್ಳಿರಿ. ನಾಳೆ ಹೊಟೆಲಿನಲ್ಲಿ ಜೂಲಿಯಸನು ಊಟಮಾಡುವ ವೇಳೆಯಲ್ಲಿ ಹೇಗಾದರೂ ಆತನನ್ನು . ಎಚ್ಚರದಪ್ಪಿಸಿ, ನೀವಾತನ ಜೇಬಿನಿಂದ ಚರ್ಮದ ಬ್ಯಾಗನ್ನು ತೆಗೆದುಕೊಳ್ಳಬೇಕು. ಅನಂತರ ಅದರಲ್ಲಿರುವ ಕಾಗದಗಳನ್ನು ತೆಗೆದು, ಆ ಪ್ರತಿ ತೆಗೆದ ನಕ್ಷೆಯನ್ನು ಆತನ ಬ್ಯಾಗಿನೊಳಗೆ ಮಡುಗಿ ಮುಂಚಿನಂತದನ್ನು ಅವನ ಜೇಬಿನೊಳಗಿಡಬೇಕು. ತಿಳಿಯಿತಲ್ಲವೆ?

ಸಾರ್ಜಿ—ಇಷ್ಟು ಮಾತ್ರವೆ; ಅಥವಾ ಬೇರೇನಾದರೂ ಮಾಡಬೇಕೆ?

ಹಿಲ್ಡರ್ಸ—ಬೇಡ. ಜೂಲಿಯಸನು ಎಚ್ಚರಗೊಳ್ಳುವುದರೊಳಗಾಗಿ ಇಷ್ಟು ಕೆಲಸ ಮಾಡಿ ನೀವು ಹೊರಟು ಹೋಗತಕ್ಕದ್ದು. ಆ ಮೇಲೆ ಮಾಡಬೇಕಾದುದನ್ನು ನಾನು ಮಾಡುವೆ.

ಸಾರ್ಜಿ—ಅವನ ಜೇಬಿನಿಂದ ತೆಗೆದ ಕಾಗದ-ಪತ್ರಗಳನ್ನು ಯಾರಿಗೆ ಕೊಡಬೇಕು?

ಹಿಲ್ಡರ್ಸ—ಅವನ್ನು ಸುಟ್ಟು ಹಾಕಿರಿ. ಅವೇನೂ ಬೇಕಾಗಿಲ್ಲ.

ಸಾರ್ಜಿ—ಆ ಕಾಗದಗಳಿಂದ ನಮಗೇನೂ ಲಾಭವಾಗದು; ಆದರೆ ಅವನಿಗಾದರೋ ನಷ್ಟವಾಗುವುದು. ಅವನಿಗೆ ನಷ್ಟಮಾಡಲು ಇಷ್ಟೇಕೆ ನೀನು ವ್ಯಸ್ತನಾಗಿರುವಿ? ನೀನು ಎಲ್ಲ ವಿಷಯವನ್ನೂ ಬಿಚ್ಚಿ ಹೇಳಲು ಸಂಕೋಚಪಡುವುದೇಕೆ? ನಮ್ಮ ಸಹಾಯದಿಂದಲೇ ನೀನು ಕೆಲಸ ಮಾಡುವಾಗ, ನಮ್ಮ ಮೇಲೆಯೇ ಇಷ್ಟು ಅವಿಶ್ವಾಸವೇ?

ಅಲೆಕ್ಸಿಸ—ಹೌದು. ನಾವು ಈ ರೀತಿ ಏಕೆ ಮಾಡುವೆವೆಂಬುದನ್ನು ತಿಳಿಯುವ ಅಧಿಕಾರವೂ ನಮಗಿಲ್ಲವೆ?

ಹಿಲ್ಡರ್ಸ—ನೀವದನ್ನು ತಿಳಿಯುವ ಅಗತ್ಯವಿಲ್ಲ.

ಅಲೆಕ್ಸಿಸ್ಸ—ಆರಂಭದಿಂದಲೇ ನೀನು ನಮ್ಮ ಹತ್ತಿರ ಕಪಟವನ್ನಾಚರಿಸುತ್ತ ಬಂದಿರುವೆ. ನೀನು ಮನಸ್ಸು ಮಾಡಿದ್ದರೆ, ಈ ಮೊದಲೇ ನಮಗೀ ನಕ್ಷೆಯನ್ನು ಕೊಡಬಹುದಿದ್ದಿತು; ಆದರೆ ಇಂದು-ನಾಳೆಯೆನ್ನುತ್ತ ನೀನಿಷ್ಟು ಸಮಯವನ್ನು ಕಳೆದೆ. ನಕ್ಷೆ ಕೊಡಲು ನೀನಿಷ್ಟು ವಿಲಂಬ ಮಾಡಿದುದೇಕೆ?

ಹಿಲ್ಬರ್ಸ—ನಿಮಗೆ ನಕ್ಷೆ ಕೊಟ್ಟುದರಲ್ಲಿ ನನಗೂ ಸ್ವಾರ್ಥವಿದೆ. ಇಷ್ಟರ ವರೆಗೆ ಸ್ವಾರ್ಥಸಿದ್ಧಿಗೆ ಸುಯೋಗ ಲಭಿಸಿರಲಿಲ್ಲ. ಈ ನಕ್ಷೆಯು ಹತ್ತು ದಿನಗಳ ಹಿಂದೆ ತಯಾರಾಗಿದ್ದಿತು; ಆದರೆ ಅದು ಸಿಕ್ಕಿದೊಡನೆ ನೀವು ಹೊರಟು ಹೋಗುವಿರಾದುದರಿಂದ, ನನ್ನ ಹಗೆಯ ನಾಶದ ಸಂದರ್ಭವು ತಪ್ಪಿ ಹೋಗುವುದೆಂದು ಬಗೆದು ನಾನಿದನ್ನು ಕೊಡಲಿಲ್ಲ.

ಅಲೆಕ್ಸಿಸ್ಸ—ಆದುದರಿಂದಲೇ ಹೇಳುವುದು, ನೀನು ನಮ್ಮೊಡನೆ ಯಥಾರ್ಥ ವ್ಯವಹಾರ ಮಾಡುತ್ತಿಲ್ಲವೆಂದು.

ಹಿಲ್ಬರ್ಸ—ಇದರಿಂದ ನಿಮಗೆ ನಷ್ಟವಾದರೂ ಏನು? ನಾನು ಮಾತು ಕೊಟ್ಟಂತೆ ನಡೆಸಿರುವೆನು. ತಡಮಾಡಿದುದರಿಂದ ನಿಮಗೆ ಲಾಭವೇ ಆಗಿದೆ. ಈ ನಕ್ಷೆಗಾಗಿ ನೀವು ಐದುಸಾವಿರ ರೂಪಾಯಿಗಳನ್ನು ಮುಂಗಡವಾಗಿ ನನಗೆ ಕೊಟ್ಟಿರುವಿರಿ; ನಕ್ಷೆ ಸಿಕ್ಕಿದ ಮೇಲೆ ಮತ್ತೂ ಇಪ್ಪತ್ತುಸಾವಿರ ರೂಪಾಯಿಗಳನ್ನು ನನಗೆ ನೀವು ಕೊಡುವುದಾಗಿ ಮಾತಾಗಿದೆ. ನನಗೊಂದು ಉಪಕಾರವನ್ನು ಮಾಡುವುದಾದರೆ, ಆ ಇಪ್ಪತ್ತುಸಾವಿರನ್ನೂ ನೀವು ನನಗೆ ಕೊಡಬೇಕಿಲ್ಲವೆಂದು ನಾನು ಹೇಳಿದ್ದೆನು. ಹೀಗಿರುವಾಗ, ನೀವು ನನ್ನ ಕೆಲಸವನ್ನು ಮಾಡಲೇಬೇಕಾಗುವುದು. ಸ್ವಲ್ಪ ಮಾತ್ರ ಪರಿಶ್ರಮದಿಂದ ಇಪ್ಪತ್ತುಸಾವಿರ ರೂಪಾಯಿಗಳು ಉಳಿಯುವುದಾದರೆ, ನಿಮಗೆ ಲಾಭವೋ-ಹಾನಿಯೋ?

ಸಾರ್ಜ—ಇದರಿಂದ ನಮಗೆ ಮತ್ತೊಂದು ಲಾಭವಿದೆ. ಜೂಲಿಯಸನನ್ನು ಹಿಡಿದ ಮೇಲೆ ಪೋಲನನ್ನು ಪೋಲಿಸರು ಬಂಧಿಸುವರು. ಜರ್ಮನ್ ಪೋಲಿಸಿರೀ ವೇಳೆ ಅವರನ್ನು ಅಪರಾಧಿಗಳೆಂದು ಪ್ರಮಾಣಿತಗೊಳಿಸುವದರಲ್ಲಿ ವ್ಯಸ್ತರಾಗಿರುವದರಿಂದ, ನಮ್ಮ ಮೇಲವರ ದೃಷ್ಟಿ ಇರುವದಿಲ್ಲ. ಈ ಸಂದರ್ಭದಲ್ಲಿ ನಾವು ಸುಲಭವಾಗಿ ಕಣ್ಮರೆಯಾಗಬಹುದು.

ಹಿಲ್ಡರ್ಸ—ನಾನಾದರೂ ನಿಮಗೆ ಹಿತಬೋಧವನ್ನೇ ಮಾಡುತ್ತಿರುವೆನು. ಇನ್ನೀ ಮಾತುಗಳನ್ನು ಬಿಡಿರಿ. ಜೂಲಿಯಸನು ನಾಳೆ ಹನ್ನೆರಡು ಗಂಟೆಗೆ ದುರ್ಗದಿಂದ ಹೊರಬೀಳುವನೆಂಬುದು ನೆನಪಿರಲಿ. ಅವನನ್ನು ಹಿಂಬಾಲಿಸಿ, ನೀವು ನನ್ನ ಉಪದೇಶಾನುಸಾರವಾಗಿ ಕೆಲಸ ಮಾಡತಕ್ಕದ್ದು.

ಸಾರ್ಜೆ—ನೀನು ನಿಶ್ಚಿಂತನಾಗಿರು. ನಾವು ನಿನ್ನುದ್ದೇಶಾನುಸಾರವೇ ಕೆಲಸ ಮಾಡುವೆವು.

ಹಿಲ್ಡರ್ಸ—ಅದರಲ್ಲಿ ನನಗೆ ಸಂಪೂರ್ಣ ವಿಶ್ವಾಸವಿದೆ. ಹಾಗೆ ನನ್ನ ಆದೇಶಾನುಸಾರವಾಗಿ ಕೆಲಸ ಗೆಯ್ಯದಿದ್ದರೆ ನಿಮಗೆ ಹಾನಿ ತಟ್ಟುವುದು.

ಸಾರ್ಜೆ-ಅಲೆಕ್ಸಿಸರು ವ್ಯಗ್ರಭಾವದಿಂದ ಕೇಳಿದರು:—ಯಾವ ಬಗೆಯ ಹಾನಿಯಾಗುವುದು?

ಹಿಲ್ಡರ್ಸ—ಇದರಲ್ಲಿ ದುರ್ಗದ ದಕ್ಷಿಣ ಭಾಗದ ನಕ್ಷೆಯಿಲ್ಲ. ನನ್ನ ಉಪದೇಶವನ್ನು ನೆರವೇರಿಸಿದ ಬಳಿಕ ಆ ಅಂಗದ ನಕ್ಷೆಯನ್ನೂ ನಾನು ನಿಮಗೆ ಕೊಡುವೆನು; ಆ ಮೊದಲಿಲ್ಲ.

ಅನಂತರ ಹಿಲ್ಡರ್ಸನು ಮದ್ಯ ಸೇವಿಸಿ ಎದ್ದು ನಿಂತನು. ಅತನು ತೆರಳಿದ ಮೇಲೆ ಅಲೆಕ್ಸಿಸನೆಂದನು:—ಈತನು ಮಹಾ ಧೂರ್ತನು.

ಹಿಲ್ಡರ್ಸನು ದಾರಿಯಲ್ಲಿ ಕೃತಕ ವೇಷವನ್ನು ತೆಗೆದು, ಕ್ಲಬ್ಬಿನ ಕಡೆಗೆ ನಡೆದನು. ಅಲ್ಲಿ ಅವನು ತನ್ನ ಗೆಳೆಯರೊಡನೆ ಆ ಇರುಳು ಕಳೆದನು.

---

## ಬಂಧನವೂ ಮರಣದಂಡನೆಯೂ

ಮರು ದಿನ ಜೂಲಿಯಸನು ನಿಶ್ಚಿತ ವೇಳೆಗೆ ಪೋಲನನ್ನು ಭೇಟಿ ಮಾಡಿ ಕಾಗದ-ಪತ್ರಗಳನ್ನು ಮರಳಿ ತೆಗೆದುಕೊಂಡನು. ಸಾಯಂಕಾಲ ಆರು ತಾಸಿನ ವರೆಗೆ ಪೋಲನ ಮೇಲೆ ಕಾವಲಿನ ಭಾರವಿದ್ದಿತು. ಆರು ಹೊಡೆಯುತ್ತಲೆ ಪೋಲನು ಮತ್ತೊಬ್ಬ ಕಾವಲುಗಾರನಿಗೆ ಬಂದೂಕನ್ನಿತ್ತು ತನ್ನ ದಾರಿ ಹಿಡಿದನು.

ರಾತ್ರಿ ಒಂಬತ್ತು ತಾಸಿಗೆ ಪೋಲನು ತನ್ನ ಗೆಳೆಯನೊಬ್ಬನನ್ನು ಕಾಣಲು ಹೋಗುತ್ತಿದ್ದನು. ಅದೇ ಸಮಯದಲ್ಲಿ ಸಶಸ್ತ್ರ ಸೈನಿಕರಿಬ್ಬರು

ಹಿಂದಿನಿಂದ ಬಂದು ಅವನ ಎರಡೂ ಕೈಗಳನ್ನು ಹಿಡಿದುಕೊಂಡರು. ಅದರಲ್ಲಿ ಒಬ್ಬನು ಜಮಾದಾರನಾಗಿದ್ದನು. ಅವನು ಹೇಳಿದನು:- ಪೋಲ, ನಿನ್ನನ್ನು ದಸ್ತಗಿರಿ ಮಾಡಲು ವಾರಂಟಿದೆ.

ಪೋಲನು ವಿಸ್ಮಯಗೊಂಡು:—ನನ್ನ ಮೇಲೆ ವಾರಂಟಿದೆಯೇ? ಇಲ್ಲ, ನೀವು ತಪ್ಪುತ್ತಿರುವಿರಿ.

ಜಮಾದಾರ—ಇಲ್ಲ, ತಪ್ಪಿಲ್ಲ. ನಿನ್ನನ್ನೇ ಹಿಡಿಯಲಾಜ್ಞೆಯಿದೆ.

ಪೋಲ—ನನ್ನಿಂದಾವ ಅಪರಾಧವಾಗಿದೆ?

ಜಮಾದಾರ—ಅದು ನನಗೆ ತಿಳಿಯದು.

ಪೋಲನ ಆಶ್ಚರ್ಯವು ಅಂಜಿಕೆಯ ರೂಪದಲ್ಲಿ ಮಾರ್ಪಟ್ಟಿತು. ತನ್ನ ಅಪರಾಧವೇನೆಂದು ಆತನು ತಿಳಿಯಲಾರದಾದನು. ಇದು ಹಿಲ್ಡರ್ಸನ ಒಳಸಂಚಿನದೇ ಫಲವೆಂದು ಅವನು ಸಂಶಯಪಟ್ಟನು.

ಜಮಾದಾರನು ಪೋಲನನ್ನು ಕೈದು ಮಾಡಿ ದುರ್ಗದ ಆಫೀಸಿಗೊಯ್ದನು. ಅಲ್ಲಿ ಕರ್ನಲ್ಲ ಗ್ಲೇಜನೂ ಮೇಜರ ಸ್ವಾರ್ಕನೂ ಕುಳಿತಿದ್ದರು. ಪೋಲನನ್ನು ಅವರ ಮುಂದೆ ನಿಲ್ಲಿಸಿ ಜಮಾದಾರನು ಹೊರಕೆರಳಿದನು.

ಕರ್ನಲ್ಲ ಗ್ಲೇಜನು ಪೋಲನನ್ನು ತಲೆಯಿಂದ ಕಾಲಿನವರೆಗೆ ನೋಡಿ:- ಪೋಲ, ಈ ದಿನ ಹನ್ನೆರಡು ಗಂಟೆಗೆ ನೀನು ಯಾರನ್ನಾದರೂ ಭೇಟಿ ಮಾಡಿರುವೆಯಾ?

ಪೋಲ—ಹೌದು, ಮಾಡಿರುವೆ.

ಕರ್ನಲ್ಲ—ಅವನ ಹೆಸರೇನು?

ಪೋಲ—ಜೂಲಿಯಸನೆಂದು.

ಕರ್ನಲ್ಲ—ಅವನು ಯಾರು?

ಪೋಲ—ಬರ್ಲಿನ್ನಿನಲ್ಲಿ ನನ್ನ ಕಾರಭಾರವಿದೆ; ಅಲ್ಲಿಯ ಮ್ಯಾನೇಜರನವನು. ಅವನು ನನ್ನದೊಂದು ಕೆಲಸದಲ್ಲಿ ಸಲಹೆ ಕೇಳಲೋಸುಗ ಬಂದಿದ್ದನು.

ಕರ್ನಲ್ಲ—ಮೊದಲೆಂದಾದರೂ ಅವನಿಲ್ಲಿಗೆ ಬಂದಿದ್ದನೆ?

ಪೋಲ—ಹೌದು, ಎರಡು-ಮೂರು ಸಲ ಬಂದಿದ್ದನು.

ಕರ್ನಲ್ಲ—ಇಂದು ಆತನ ಹತ್ತಿರ ಏನೇನು ಮಾತು ನಡೆದಿದ್ದಿತು? ಅವನು ಹೋಗುವಾಗ ನೀನು ಅದಾವ ವಸ್ತುವನ್ನವನಿಗೆ ಕೊಟ್ಟಿದ್ದೆ?

ಪೋಲ—ನಿನ್ನೆ ರಾತ್ರಿ ಅವನು ಕೆಲ ಕಾಗದ-ಪತ್ರಗಳನ್ನು ನನ್ನ ಕೈಯಲ್ಲಿ ಕೊಟ್ಟು ಹೋಗಿದ್ದನು. ಅವನ್ನು ಓದಿ ನೋಡಿ ಇಂದು ಹಿಂದಿರುಗಿಸಿದ್ದೆನು. ಅದರಲ್ಲೊಂದು ಕಂಟ್ರಾಕ್ಟದ ಎಸ್ಟಿಮೇಟಿದ್ದಿತು.

ಕರ್ನಲ್ಲ—ನೀನು ಹಿಂದುರುಗಿಸಿದ್ದ ಕಾಗದದ ಜೊತೆಗೆ ಎಸ್ಟಿಮೇಟಿನ ಹೊರತು ಬೇರೆ ಏನಾದರೂ ಇದ್ದಿತೇ? ಸತ್ಯವನ್ನು ನುಡಿ.

ಪೋಲ—ನನ್ನ ವ್ಯಾಪಾರಕ್ಕೆ ಸಂಬಂಧಪಟ್ಟ ಕಾಗದಗಳ ವಿನಃ ಮತ್ತೇನೂ ಅದರಲ್ಲಿ ಇದ್ದಿಲ್ಲ. ಈ ಪ್ರಶ್ನೆಯನ್ನೇಕೆ ನನ್ನ ಹತ್ತಿರ ಕೇಳುತ್ತಿರುವಿರಿ? ನನಗಿನ್ನೂ ಇದು ಗೊತ್ತಾಗಲಿಲ್ಲ.

ಕರ್ನಲ್ಲ ಬೆದರಿಸುತ್ತ:—ಸುಮ್ಮನಿರು. ಮತ್ತೇನೂ ಹೇಳದೆ ನನ್ನ ಪ್ರಶ್ನೆಗಳಿಗೆ ಮಾತ್ರ ಉತ್ತರ ಕೊಡು. ನೀನು ಕೊಟ್ಟ ಕಾಗದ-ಪತ್ರಗಳನ್ನು ನಿನ್ನ ಮ್ಯಾನೇಜರನು ಎಲ್ಲಿಟ್ಟುಕೊಂಡಿದ್ದನು?

ಪೋಲ—ಬದಾಮಿ ಬಣ್ಣದ ತೊಗಲಿನ ಚೀಲದಲ್ಲಿ.

ಕರ್ನಲ್ಲನು ಒಂದು ಬ್ಯಾಗನ್ನು ತೋರಿಸುತ್ತ:—ಇದೇ ಚೀಲವೆ?

ಪೋಲನು ಚೀಲವನ್ನು ನೋಡಿ:—ಹೌದು, ಇದೇ ಅದು.

ಕರ್ನಲ್ಲನು ಆ ಚೀಲದೊಳಗಿನದೊಂದು ನಕ್ಷೆಯನ್ನೀಚೆಗೆ ತೆಗೆದು, ಅದನ್ನು ಬಿಡಿಸದೆ:—ನಿನ್ನ ಮ್ಯಾನೇಜರನು ಸೆರೆಹಿಡಿಯಲ್ಪಟ್ಟಿದ್ದಾನೆ.

ಪೋಲ—ಅದಾವ ಅಪರಾಧದಿಂದ ಹಿಡಿದುದು?

ಕರ್ನಲ್ಲ—ಅವನು ಬರ್ಲಿನಕ್ಕೆ ಹೋಗುತ್ತಿದ್ದನು. ಸ್ಟೇಶನಿನಲ್ಲವನನ್ನು ಹಿಡಿಯಲಾಗಿದೆ. ಅವನ ಜೇಬಿನೊಳಗೆ ಈ ಬ್ಯಾಗು ಸಿಕ್ಕಿತು. ಇದರಲ್ಲೊಂದು ನಕ್ಷೆಯಿದ್ದಿತು; ನಿನ್ನ ಕಂಟ್ರಾಕ್ಟದ ಎಸ್ಟಿಮೇಟವಿರಲಿಲ್ಲ.

ಪೋಲ—ಈ ನಕ್ಷೆಯು ಆತನ ಬ್ಯಾಗಿನಲ್ಲಿದ್ದಿತೇ?

ಕರ್ನಲ್ಲ—ನೀನು ಗುಪ್ತ ರೀತಿಯಿಂದ ನನ್ನೀ ಕೋಟೆಯ ನಕ್ಷೆಯನ್ನು ಮಾಡಿಸಿ, ಮಾರಾಟಕ್ಕಾಗಿ ನಿನ್ನ ಮ್ಯಾನೇಜರನ ಕೈಯಲ್ಲಿ ಕಳುಹಿಸಿದ್ದೆ. ಆಕಸ್ಮಾತ್ತಾಗಿ ಅವನು ಬಂಧಿಸಲ್ಪಟ್ಟನು. ನೀನು ಗೊತ್ತಿದ್ದೇ ನಿನ್ನ ಅನಭಿಜ್ಞತೆಯನ್ನು ತೋರಿಸುತ್ತಿರುವೆ. ಯುರೋಪದ ಅದಾವ ರಾಷ್ಟ್ರವಾದರೂ ನನ್ನೀ ದುರ್ಗದ ನಕ್ಷೆಯ ಬದಲಿಗೆ ರಾಶಿಗಟ್ಟಲೆ ಹಣ ಸುರಿಸಲಿಕ್ಕೆ ಸಿದ್ಧವಿದೆಯೆಂಬುದು ನನಗೆ ಗೊತ್ತಿದೆ.

ಪೋಲನು ದಂಗುಬಡೆದು:—ಇದೆಂತಹ ಆಶ್ಚರ್ಯಕರವಾದ ಮಾತ ನ್ನಾಡುತ್ತಿರುವಿರಿ ನೀವು? ನಾನು ನಕ್ಷೆಯನ್ನು ತಯಾರಿಸಿದುದೂ ಇಲ್ಲ; ಇಂತಹ ವಿಷಯವನ್ನು ಚಿಂತಿಸಿದುದೂ ಇಲ್ಲ. ನನ್ನ ಮ್ಯಾನೇಜರನ ಬ್ಯಾಗಿ ನಲ್ಲಿ ಈ ನಕ್ಷೆ ಹೇಗೆ ಸಿಕ್ಕಿತೋ ನನಗಂತೂ ಹೊಳೆಯುವುದಿಲ್ಲ.

ಕರ್ನಲ್ಲ—ನನ್ನನ್ನು ಮೋಸಪಡಿಸಲು ಯತ್ನಿಸದಿರು. ನಾನಷ್ಟು ಅವಿವೇಕಿಯಲ್ಲ.

ಪೋಲ—ಈ ನಕ್ಷೆಯನ್ನು ನಾನು ಜೂಲಿಯಸನಿಗೆ ಕೊಟ್ಟಿಲ್ಲವೆಂದು ಶಪಥಪೂರ್ವಕವಾಗಿ ಹೇಳುವೆನು.

ಕರ್ನಲ್ಲ—ಹಾಗಾದರೆ ಯಾರು ಕೊಟ್ಟಿದ್ದರು?

ಪೋಲ—ಅದನ್ನು ನಾನರಿಯೆನು ಜೂಲಿಯಸನು ಹೇಗೆ ಹಿಡಿ ಯಲ್ಪಟ್ಟನೆಂಬುದನ್ನು ತಿಳಿಸುವಿರಾ?

ಕರ್ನಲ್ಲ—ನಿನ್ನ ಮ್ಯಾನೇಜರ ಮದ್ಯದ ಅಮಲಿನಿಂದೇರಿಕೊಂಡಿ ದ್ದನು. ಆ ಆವೇಶದಲ್ಲಿಯೇ ಆತನು ತನ್ನೊಬ್ಬ ಮಿತ್ರನ ಹತ್ತಿರ-ತನ್ನ ಬ್ಯಾಗಿನಲ್ಲಿ ಮೇಗಡೀ ವರ್ಗದ ಕೋಟೆಯ ನಕ್ಷೆಯಿದೆಯೆಂದು ಹೇಳಿದ ನಂತೆ. ಆ ಮಿತ್ರನು ಪೋಲೀಸರಿಗೆ ರಿಪೋರ್ಟ ಮಾಡಿದನು. ಆಗ ಪೋಲೀ ಸರು ಸ್ಟೇಶನಿನಲ್ಲವನನ್ನು ಸೆರೆ ಹಿಡಿದರು.

ಪೋಲ—ಜೂಲಿಯಸನ ಆ ಮಿತ್ರನ ಹೆಸರು ನಿಮಗೆ ಗೊತ್ತಿರುವುದೇ?

ಕರ್ನಲ್ಲ—ಇಲ್ಲ; ಆತನು ತನ್ನ ಪರಿಚಯವನ್ನು ಪೋಲೀಸರಿಗೆ ಕೊಡಲಿಲ್ಲ.

ಪೋಲ—ನನ್ನ ಮ್ಯಾನೇಜರನು ಏನು ಹೇಳಿದನು? ಈ ನಕ್ಷೆಯನ್ನು ನಾನೇ ಕೊಟ್ಟೆನೆಂದು ಹೇಳಿದನೆ?

ಕರ್ನಲ್ಲ:— ಇಲ್ಲ, ಅವನು ಹಾಗೆ ಹೇಳಲಿಲ್ಲ. ಅವನ ಹೇಳಿಕೆ ಯೇನಂದರೆ, ತಾನು ಹೋಟೆಲ್ಲಿನಲ್ಲಿ ಊಟ ಮಾಡುತ್ತಿದ್ದೆ. ಅದೇ ವೇಳೆ ಯಾವನೋ ದುಷ್ಟನು ಚಾತುರ್ಯದಿಂದ ಮಾದಕ ದ್ರವ್ಯದ ಮೂಲಕ ತನ್ನನ್ನು ಮೂರ್ಛೆಗೊಳಿಸಿ, ಬ್ಯಾಗಿನಿಂದ ಕಾಗದ-ಪತ್ರಗಳನ್ನು ತೆಗೆದು, ಈ ನಕ್ಷೆಯನ್ನದರ ಸ್ಥಳದಲ್ಲಿಟ್ಟು ಹೋದನು, ಎಂದು. ಇದನ್ನು ಗೊತ್ತು ಹಚ್ಚಲಿಕ್ಕೂ ಪೋಲೀಸರು ಹೋಗಿದ್ದರು; ಆದರೆ ಏನೂ ಪತ್ತೆಯಾಗಲಿಲ್ಲ.

ಇದರಿಂದ ಇವೆಲ್ಲ ನಿನ್ನ ಮ್ಯಾನೇಜರನ ಕಪೋಲ-ಕಲ್ಪಿತ ಮಾತುಗಳೆಂದು ಗೊತ್ತಾಗುತ್ತದೆ.

ಪೋಲ— ಜೂಲಿಯಸನು ಸುಳ್ಳಾಡುವವನಲ್ಲ. ಯಾವನೋ ದುಷ್ಟನು ನನ್ನನ್ನು ನಾಶಗೊಳಿಸುವ ಉದ್ದೇಶದಿಂದ ಈ ಕೆಲಸ ಮಾಡಿರಬೇಕು.

ಕರ್ನಲ್ಲ— ಪ್ರಮಾಣವಿಲ್ಲದೆ ನಿನ್ನ ಯಾವ ಮಾತನ್ನೂ ಮನ್ನಿಸಲಾಗುವುದಿಲ್ಲ.

ಪೋಲ— ದೇವರಿಗೆ ಗೊತ್ತಿದೆ, ನಾನು ಸರ್ವಥಾ ನಿರಪರಾಧಿಯೆಂದು. ಇದೆಲ್ಲ ಸಂಪೂರ್ಣವಾಗಿ ಒಳಸಂಚು. ಇಂತಹ ದುಷ್ಕೃತ್ಯವನ್ನೆಸಗಿ ಹಣಗಳಿಸಲೆಳಿಸಲು ನನ್ನ ಹತ್ತಿರ ಹಣಕ್ಕೆ ಕೊರತೆಯಿಲ್ಲ. ಸ್ವದೇಶಕ್ಕೆ ಅನಿಷ್ಟವನ್ನುಂಟು ಮಾಡಲು ಪ್ರಯತ್ನ ಮಾಡುವಂತಹ ನೀಚನಲ್ಲ ನಾನು.

ಕರ್ನಲ್ಲ— ನಿನ್ನ ಸ್ವದೇಶ ಪ್ರೇಮದ ಪರಿಚಯವಾದರೊ ಮೊದಲೇ ಸಿಕ್ಕಿಹೋಗಿದೆ.

ಇಷ್ಟು ಹೊತ್ತಿನ ಮೇಲೆ ಮೇಜರ ಸ್ಟಾರ್ಕನು ಬಾಯಿಬಿಟ್ಟನು:— ಈ ಯುವಕನಲ್ಲಿ ಸ್ವದೇಶ ಪ್ರೇಮವು ಎಳ್ಳಷ್ಟೂ ಇಲ್ಲವೆಂಬುದನ್ನು ನಾನು ಬಲ್ಲೆನು. ಈ ಮನುಷ್ಯನು ಬಾಳ್ವೆಯ ಹೆಚ್ಚಿನ ಸಮಯವನ್ನು ಇಂಗ್ಲಂಡಿನಲ್ಲಿ ಕಳೆದಿರುವನು. ಇವನ ತಾಯಿಯು ಆಂಗ್ಲ ಸ್ತ್ರೀ. ಈತನು ಆಂಗ್ಲ ಕನ್ಯೆಯನ್ನೇ ಮದುವೆ ಮಾಡಿಕೊಂಡಿರುವನು. ಇವನಿಗೆ ಸ್ವದೇಶಕ್ಕೆ ಬರುವ ಇಚ್ಛೆಯೂ ಇದ್ದಿಲ್ಲ. ಡಾಕ್ಟರೀ ನಿರೀಕ್ಷಣ ಕಾಲದಲ್ಲಿವನು ಹತ್ತು ಸಾವಿರ ರೂಪಾಯಿಗಳನ್ನು ಲಂಚ ಕೊಡಲು ಹವಣಿಸಿದ್ದನು.

ಕರ್ನಲ್ಲ— ಇವೆಲ್ಲ ಸ್ವದೇಶ ಪ್ರೇಮದ ಜ್ವಲಂತೋದಾಹರಣೆಗಳು.

ಮೇಜರ— ಈ ಯುವಕನು ಆದೇ ಸಮಯದಿಂದ ಸ್ವದೇಶವನ್ನು ನಾಶಗೊಳಿಸುವ ಯತ್ನದಲ್ಲಿ ತಲ್ಲೀನನಾಗಿದ್ದಾನೆಂದು ನನಗೆ ನಂಬುಗೆಯಿದೆ.

ಪೋಲನಿಗೆ ಕಣ್ಣು ಕತ್ತಲೆ ಕಟ್ಟಿದಂತಾಯಿತು. ಈ ವಿಪತ್ತಿನಿಂದ ಉದ್ಧಾರವಾಗಲಾರೆನೆಂದು ಆತನೆಣಿಸಿದನು. ಏನೋ ಹೇಳಬೇಕೆಂದಿದ್ದನು; ಆದರೆ ನಾಲಿಗೆಯಿಂದ ಶಬ್ದಗಳೇ ಹೊರಡಲಿಲ್ಲ.

ಕರ್ನಲ್ಲನು ನುಡಿದನು:— ಯುವಕಾ, ವಿಚಾರಕರ ಕಣ್ಣಿಗೆ ಮಣ್ಣು ಚೆಲ್ಲಬಲ್ಲೆನೆಂದು ನೀನೆಣಿಸಬೇಡ. ನೀನು ರಾಜದ್ರೋಹದ ಅಪರಾಧದಲ್ಲಿ ಆರೋಪಿತನಾಗಿರುವೆ.

ಪೋಲನು ಉನ್ಮತ್ತನಂತೆ:—ಬಡಬಡಿಸಿದ 'ರಾಜದ್ರೋಹಕ್ಕೆ ದಂಡನೆಯೆಂದರೆ ಮೃತ್ಯು. ಮೆಡೆಲಿನಾ, ಪ್ರಿಯ ಮೆಡೆಲಿನಾ! ಇನ್ನು ನಿನ್ನ ದರ್ಶನವಾಗದಲ್ಲವೇ?' ತಲೆ ತಿರುಗಿದ ಕಾರಣ ಪೋಲನು ದೊಪ್ಪನೆ ಬಿದ್ದುಬಿಟ್ಟನು. ಕಲ್ಲಿನ ಗೋಡೆಗೆ ಬಡಿದುದರಿಂದ ತಲೆಗೆ ಪೆಟ್ಟಾಯಿತು. ಕ್ಷಣಮಾತ್ರದಲ್ಲಿಯೇ ಅವನು ಮೈಮರೆತನು.



ಈ ಘಟನೆಯಾದೇಳು ದಿನಗಳ ಮೇಲೊಂದು ದಿನ ಸೈನಿಕ ನ್ಯಾಯಾಲಯದಲ್ಲಿ ಪೋಲನ ವಿಚಾರಣೆಗಾರಂಭವಾಯಿತು. ಸೈನಿಕ ವಿಭಾಗದ ವಿಚಾರಣೆಯೆಂದರೆ ಬರಿಯ ಅಭಿನಯ ಮಾತ್ರವಾಗಿರುತ್ತದೆ. ಸ್ವಲ್ಪದರಲ್ಲಿಯೇ ಅದು ಕೊನೆಗಾಣುತ್ತಿದ್ದಿತು. ಅಂತೆಯೇ ಪೋಲನ ಮೇಲೆ ಹೊರಿಸಿದ ಅಭಿಯೋಗದ ವಿಚಾರಣೆಯಾಗಲಿಕ್ಕೂ ಹೆಚ್ಚಿಗೆ ಸಮಯ ಹಿಡಿಯಲಿಲ್ಲ.

ಆ ದಿನ ವಿಚಾರಣಾಲಯವು ಜನರಿಂದ ಕಿಕ್ಕಿರಿದಿದ್ದಿತು. ಸೈನಿಕ ವಿಭಾಗದ ಇಬ್ಬರು ಪ್ರಧಾನಾಧಿಕಾರಿಗಳೇ ನ್ಯಾಯಾಧೀಶರಾಗಿ ವ್ಯಾಜ್ಯದ ವಿಚಾರಣೆ ಮಾಡಲು ಕುಳಿತರು. ಶಸ್ತ್ರ ಸೈನಿಕರು ಪೋಲನನ್ನು ಸುತ್ತುವರಿದು ನಿಂತುಕೊಂಡಿದ್ದರು.

ಒಬ್ಬ ಪ್ರಧಾನಾಧಿಕಾರಿಗಳು ಪೋಲನ ಪಕ್ಷವಾಗಿ ತುಂಬಾ ಯೋಗ್ಯತೆಯಿಂದ ಸಮರ್ಥನೆಗೈದರು; ಆದರೆ ಪೋಲನಿಗೆ ವಿರುದ್ಧವಾಗಿ ಅಕಾಟ್ಯ ಪ್ರಮಾಣವಿದ್ದ ದೆಸೆಯಿಂದ ಅದರಿಂದೇನೂ ಪ್ರಭಾವ ಬೀಳಲಿಲ್ಲ. ಜೂಲಿಯಸನು ಸಾಕ್ಷ್ಯಗಾರನಾಗಿ ನ್ಯಾಯಾಸ್ಥಾನಕ್ಕೆ ತರಲ್ಪಟ್ಟಿದ್ದನು. ಆತನು ಮೊದಲು ನುಡಿದುದನ್ನೇ ಪುನರಾವರ್ತಿಸಿದನು. ಪೋಲನೂ ಆತ್ಮಸಮರ್ಥನೆಗಾಗಿ ಪೇಚಾಡಿದನು; ಆದರೆ ಫಲಕಾರಿಯಾಗಲಿಲ್ಲ.

ಕೆಲಸವೆಲ್ಲ ಮುಗಿದ ತರುವಾಯ ವಿಚಾರಕರು ತೀರ್ಮಾನ ಬರೆಯಲು ಕುಳಿತರು. ಬಹಳ ಹೊತ್ತಿನ ಮೇಲೆ ಪ್ರಧಾನ ವಿಚಾರಕರು ಗಂಭೀರ ಧ್ವನಿಯಲ್ಲಿ ನುಡಿದರು:— ಪೋಲ, ನಿನ್ನ ಮೇಲಾರೋಪಿತವಾದ ಅಭಿಯೋಗವು ಪ್ರಮಾಣಿತವಾಗಿ ಹೋಗಿದೆ. ನಿನ್ನ ಅಪರಾಧವು ಬಹು ದೊಡ್ಡದು. ನಾವು ನಿನಗೆ ಮರಣದಂಡನೆಯ ಶಿಕ್ಷೆಯನ್ನೀಯುತ್ತೇವೆ. ಸಾಮರಿಕ ವಿಧಾನಾನುಸಾರವಾಗಿ ನೀನು ಗುಂಡು ಹಾರಿಸಿ ಕೊಲ್ಲಲ್ಪಡುವೆ. ನಿನ್ನ ಐಶ್ವರ್ಯವನ್ನು ಸರಕಾರವು ವಶಪಡಿಸಿಕೊಳ್ಳುವುದು.

ಪೋಲನು ಹುಚ್ಚನಂತೆ ಕಿರಿಚಿ:—ನಾನು ನಿರಪರಾಧಿಯು. ಅಹಾ! ದೇವರಿಲ್ಲವೇನು? ಸಹಸಾ ಪೋಲನ ದೃಷ್ಟಿ ಪಕ್ಕಕ್ಕೆ ಸರಿಯಿತು. ನೋಡಿದ, ಹಿಲ್ಬರ್ಸನು ನಿಂತಿದ್ದನು. ಅತನ ಮೊಗದಲ್ಲಿ ಆನಂದವು ಮಿನುಗುತ್ತಿತ್ತು.

ಪೋಲನು ಕೂಗಿ:—ಏ, ನರಾಧಮ! ನಿನ್ನದೇ ಒಳಸಂಚಿನ ಫಲ ವಿದು. ನನ್ನ ಬದಲಿಗೆ ನಿನಗೇ ಇಂದು ಪ್ರಾಣದಂಡನೆ ಸಿಗಬೇಕಿದ್ದಿತು. ಪರಮೇಶ್ವರನಿರುವುದಾದರೆ............

ಪೋಲನ ಮಾತು ಬಾಯಿಲ್ಲಿಯೇ ಉಳಿಯಿತು. ಪಹರೆಯವರವ ನನ್ನು ಎಳೆದುಕೊಂಡು ಹೋಗಿ ಬಂಧನದಲ್ಲಿಟ್ಟರು.

---

## ಸಮ್ರಾಟರ ಆಜ್ಞಾಪತ್ರ

ಅದೊಂದು ದಿನ ಸಾಯಂಕಾಲ ಭಯಂಕರ ಮಳೆ ಸು[illegible] ಆಗ ಒಂದು ಎಕ್ಸಪ್ರೆಸ್ಸ ಟ್ರೇನು ಲಂಡನದ ಪೇಂಡಿಂಗ್ಟನ್ನ ಸ್ಟೇಶನ್ನಿನಲ್ಲಿ ನಿಂತಿದ್ದಿತು. ಫರ್ಸ್ಟಕ್ಲಾಸಿನಿಂದಿಬ್ಬರು ಯಾತ್ರಿಕರು ಕೈಯಲ್ಲಿ ಬ್ಯಾಗನ್ನು ಹಿಡಿದುಕೊಂಡು ಸ್ಟೇಶನ್ನಿನಲ್ಲಿಳಿದರು. ಅವರೊಳಗೊಬ್ಬನು ಬ್ಲೇಕನು, ಇನ್ನೊಬ್ಬನು ಸ್ಮಿತ್ತನು. ಬ್ಲೇಕನು ಇನ್‌ಫ್ಲುಯೆಂಜಾ ಜ್ವರದಿಂದ ಪೀಡಿತ ನಾಗಿ ಹವೆ ಬದಲಾಯಿಸಲು ಸಮುದ್ರ ತಟವರ್ತಿಯಾದೊಂದು ನಗರಕ್ಕೆ ಹೋಗಿದ್ದು, ಈಗ ಆರೋಗ್ಯವಂತನಾಗಿ, ಲಂಡನ್ನಿಗೆ ಬಂದಿದ್ದನು. ಸ್ಟೇಶನ್ನಿ ನಿಂದ ಹೊರಬಂದು ಬಂಡಿಯನ್ನೇರಿ ಬ್ಲೇಕನು ಸ್ಮಿತ್ತನೊಂದಿಗೆ ಬೇಕರ ಸ್ಟ್ರೀಟಿನಲ್ಲಿರುವ ತನ್ನ ಮನೆಯನ್ನು ತಲುಪಿದನು.

ಅಲ್ಲವನು ಕೋಣೆಯನ್ನು ಪ್ರವೇಶಿಸುತ್ತಲೆ ಪೋಲನ ಪತ್ನಿಯು ಕುರ್ಚಿಯೊಂದರಲ್ಲಿ ಕುಳಿತಿರುವುದನ್ನು ಕಂಡನು. ಅವಳ ಮುಖವು ಬಹಳ ಕಂದಿಹೋಗಿದ್ದಿತು. ಬ್ಲೇಕನು ಸೋಜಿಗಗೊಂಡು ಕೇಳಿದನು:—ಮಿಸೆಸ್ ಪೋಲ, ನೀವೀ ವೇಳೆಯಲ್ಲಿ ಇಲ್ಲಿಗೆ ಬರುವ ಕಷ್ಟವಹಿಸಿದುದೇಕೆ?

ಮೆಡೆಲಿನ್:—ದೊಡ್ಡ ಸಂಕಟದಲ್ಲಿ ಸಿಲುಕಿ, ಸಹಾಯದ ಆಶೆಯಿಂದ ನಿಮ್ಮ ಬಳಿಗೆ ಬಂದಿರುವೆನು. ನೀವು ಹೊರಗೆ ಹೋಗಿರುವಿರೆಂದೂ ಇಂದು ಸಂಜೆಗೆ ಖಂಡಿತ ಬರುವಿರೆಂದೂ ನಿಮ್ಮ ನೌಕರನಿಂದ ತಿಳಿಯಿತು. ಆದುದ ರಿಂದಲೇ ಕುಳಿತು ನಿಮ್ಮ ದಾರಿ ನೋಡುತ್ತಿದ್ದೆ. ನನ್ನ ಸ್ವಾಮಿಯು ದೊಡ್ಡ ವಿಪತ್ತಿನಲ್ಲಿ............

ಬ್ಲೇಕ—ಏನು? ಪೋಲನಿಗೇನಾಯಿತು? ಇತ್ತ ಹಲವು ದಿನಗಳಿಂದ ಅವನ ಸುದ್ದಿ ನನಗೆ ದೊರೆತಿಲ್ಲ.

ಮೆಡೆಲಿನ್—ರಾಜದ್ರೋಹದ ಅಭಿಯೋಗದಲ್ಲವರಿಗೆ ಪ್ರಾಣದಂಡನೆಯ ಅಪ್ಪಣೆ ಕೊಡಲಾಗಿದೆ.

ಬ್ಲೇಕ—ಏನಂದಿರಿ? ನನಗಿದರಲ್ಲಿ ನಂಬುಗೆಯಾಗುವುದಿಲ್ಲ.

ಮೆಡೆಲಿನ್—ಆದರೆ ಈ ಮಾತು ಸತ್ಯ. ನನ್ನ ಸ್ವಾಮಿಯು ನಿರಪರಾಧಿಗಳು. ಆದರೂ ಅವರು ಗುಂಡಿನ ಬಾಯಿಗೆ ಕೊಡಲ್ಪಡುವರು. ಮೊದಲು ನನಗಿದು ಗೊತ್ತಿರಲಿಲ್ಲ. ಇವತ್ತು ನನಗವರದೊಂದು ಕಾಗದ ಸಿಕ್ಕಿದೆ; ಆದರೆ ಅದರಲ್ಲವರು ಯಾವ ವಿಷಯವನ್ನೂ ಬಿಚ್ಚಿ ಬರೆದಿಲ್ಲ. ಬರ್ಲಿನ್ನಿನಿಂದ ಅವರ ಕಾರ್ಯಕರ್ತ್ಯರೊಬ್ಬನು ನನ್ನ ಬಳಿಗೊಂದು ಸಮಾಚಾರ ಪತ್ರ ಕಳುಹಿಸಿರುವನು. ಅದರಿಂದಲೇ ನನಗಿದರ ವಿವರ ಗೊತ್ತಾಯಿತು. ನಿಮಗಾಗಿ ಆ ಪತ್ರಿಕೆಯನ್ನು ಬರುತ್ತಾ ತಂದಿರುವೆನು. ಮೆಡೆಲಿನಳು ಜೇಬಿನಿಂದ ಪತ್ರಿಕೆಯನ್ನು ತೆಗೆದುಕೊಟ್ಟಳು. ಅದರ ಜೊತೆಗೆ ಪೋಲನ ಕಾಗದವನ್ನೂ ಕೊಟ್ಟಳು.

ಬ್ಲೇಕನು ಮೊದಲು ಕಾಗದವನ್ನೋದಿದನು. ಅದರ ಪ್ರತಿಯೊಂದು ಅಕ್ಷರದಲ್ಲಿಯೂ ವೇದನೆಯು ತುಂಬಿಕೊಂಡಿದ್ದಿತು. ಆ ಕಾಗದವನ್ನು ಪೋಲನು ಅಂತಿಮ ವಿದಾಯಕ್ಕಾಗಿ ತನ್ನ ಪ್ರಿಯತಮೆಗೆ ಕಳುಹಿಸಿದ್ದನು. ಅದರಲ್ಲಿ ತನ್ನನ್ನು ನೋಡಲು ಬರಲಾಗದೆಂದು ಮೆಡೆಲಿನಳ ಹತ್ತಿರ ಅನುರೋಧ ಗೈದಿದ್ದನು.

ಅನಂತರ ಬ್ಲೇಕನು ಪತ್ರಿಕೆಯನ್ನೋದಲಾರಂಭಿಸಿದನು. ಅದರಲ್ಲಿ ಪೋಲನ ಮೇಲಿನ ಆರೋಪವೂ ತೀರ್ಪಿನ ಸಮಸ್ತ ವೃತ್ತಾಂತವೂ ವಿಸ್ತೃತವಾಗಿ ಅಚ್ಚಾಗಿದ್ದಿತು. ಬ್ಲೇಕನದನ್ನು ಎರಡು ಸಲ ಮನಸ್ಸಿಟ್ಟು ಓದಿದನು; ಆದರೆ ಪೋಲನ ಮೇಲಾರೋಪಿಸಿದ ಅಭಿಯೋಗದ ಸತ್ಯತೆಯಲ್ಲಾತನಿಗೆ ತಿಲಾಂಶವೂ ವಿಶ್ವಾಸ ಹುಟ್ಟಲಿಲ್ಲ. ಆದರೂ ಇದರಿಂದ ಪೋಲನು ಉದ್ಧಾರಹೊಂದುವುದು ಕಠಿಣವೆಂದಾತನು ಬಗೆದನು. ಅದರಿಂದವನಿಗೆ ಮಾನಸಿಕ ವ್ಯಥೆಯುಂಟಾಯಿತು. ಮುಖವನ್ನು ತಿರುಗಿಸಿಕೊಂಡು ಬ್ಲೇಕನು ಪೋಲನ ಬಿಡುಗಡೆಯ ಉಪಾಯವನ್ನು ಹುಡುಕಿತೆಗೆಯಲು ಆಲೋಚಿಸತೊಡಗಿದನು.

ಬಹಳ ಹೊತ್ತಿನ ವರೆಗೆ ಯೋಚಿಸಿ ಬ್ಲೇಕನು:— ಈ ವಾರ್ತೆಯಿಂದ ನನಗದೆಷ್ಟು ವ್ಯಸನವಾಗಿದೆಯೆಂಬುದನ್ನು ನೀವರಿತಿರಬಹುದು; ಆದರೆ ನಾನೇನು ಮಾಡಬೇಕೆಂಬುದನ್ನು ನನ್ನಿಂದಿನ್ನೂ ಸ್ಥಿರಪಡಿಸಲಾಗಿಲ್ಲ.

ಮೆಡೆಲಿನ್— ಈ ವಿಪತ್ತಿನಲ್ಲಿ ನಾನು ಬೇರೆ ಯಾರ ಬಳಿಗೂ ಹೋಗಲಾರೆನು. ನನ್ನ ಸ್ವಾಮಿಗೆ ಮಿತ್ರರು ಕಡಿಮೆಯಿಲ್ಲವೆಂದು ನಾನು ಬಲ್ಲೆನು; ಆದರೆ ಅವರೆಲ್ಲರೂ ಅವರ ಸುಖದ ಸಂಗಾತಿಗಳು. ದುಃಖದಲ್ಲಿ ಕೆಲಸಕ್ಕೆ ಬರುವವರಲ್ಲ. ನಿಮ್ಮ ಘನಿಷ್ಠತೆಯು ಕೆಲ ದಿನಗಳಿಂದೀಚೆಯದಾದಾಗ್ಯೂ ನಿಮ್ಮಲ್ಲಿ ನನಗೆ ಬಹು ದೊಡ್ಡ ಆಶೆಯಿದೆ. ಆದುದರಿಂದಲೇ ನಿಮ್ಮ ಬಳಿಗೆ ಬಂದಿರುವೆನು. ಅವರ ಉದ್ಧಾರಕ್ಕೇನೂ ಉಪಾಯವಿಲ್ಲವೇ?

ಬ್ಲೇಕ— ನೀವು ಕಂಗೆಡಬಾರದು. ವಿಪತ್ತಿನಲ್ಲಿ ಸಾಹಸವೇ ಬಲವು. ನಾನವರ ಉದ್ಧಾರಕ್ಕೆ ಹೆಣಗಾಡಲು ಸ್ವಲ್ಪವೂ ಉದಾಸೀನತೆ ತೋರಿಸುವುದಿಲ್ಲ. ಮೊದಲು ನೀವು ನನ್ನ ಒಂದೆರಡು ಪ್ರಶ್ನೆಗಳಿಗೆ ಉತ್ತರ ಕೊಡಿರಿ. ಲೆಫ್ಟನೆಂಟ ಹಿಲ್ಜರ್ಸನು ಮೇಗಡೀವರ್ಗದ ಕೋಟೆಯಲ್ಲಿಯೇ ಕೆಲಸ ಮಾಡುತ್ತಿರುವನೇ?

ಮೆಡೆಲಿನ— ಹೌದು. ನನ್ನ ಸ್ವಾಮಿಯು ಕೆಲಸ ಮಾಡುತ್ತಿರುವ ರೆಜಿಮೆಂಟಿಗೆ ಅವನೇ ಲೆಫ್ಟನೆಂಟನು

ಬ್ಲೇಕ— ನಿಮಗೆ ಬರೆದ ಕಾಗದಗಳಲ್ಲಿ ಪೋಲನು ಹಿಲ್ಜರ್ಸನ ವಿಷಯದಲ್ಲೇನಾದರೂ ಬರೆದಿದ್ದನೇ?

ಮೆಡೆಲಿನ— ಹೌದು. ಅವರ ಪ್ರತಿಯೊಂದು ಪತ್ರದಲ್ಲಿ ಅವನ ಚರ್ಚೆಯಿರುತ್ತಿದ್ದಿತು. ಹಿಲ್ಜರ್ಸನು ತಮ್ಮೊಂದಿಗೆ ಬಹಳ ಕಟುವಾಗಿ ವರ್ತಿಸುತ್ತಾನೆಂದು ಅವರು ಬರೆದಿದ್ದರು. ಇಷ್ಟು ದಿನಗಳ ಮೇಲದು ಕೈಗೂಡಿದಂತೆ ತೋರುತ್ತದೆ. ಹಿಲ್ಜರ್ಸನೇ ಒಳಸಂಚು ನಡೆಸಿ ನನ್ನ ಸ್ವಾಮಿಯನ್ನು ಸಿಕ್ಕಿಸಿರುವನೆಂದು ನನಗೆ ಬಲವಾದ ನಂಬಿಗೆಯಿದೆ.

ಬ್ಲೇಕ— ನನ್ನ ಧಾರಣೆಯೂ ಅದೇ. ಹಿಲ್ಜರ್ಸನು ಒಂದಿಲ್ಲೊಂದು ದಿನ ಖಂಡಿತವಾಗಿ ತನ್ನನ್ನು ಸಂಕಟದಲ್ಲಿ ಕೆಡಹುವನೆಂದು ನಿನ್ನ ಸ್ವಾಮಿಯು ನನ್ನ ಹತ್ತಿರವೂ ಹೇಳಿದ್ದನು.

ಮೆಡೆಲಿನ— ನಿಜವಾದ ಅಪರಾಧಿಯು ಹಿಲ್ಜರ್ಸನು. ಚಾತುರ್ಯದಿಂದವನು ನನ್ನ ಸ್ವಾಮಿಯ ಮೇಲೆ ಆ ಅಭಿಯೋಗ ಹಾಕಿರುವನು.

ಅವರು ನಿಷೇಧಿಸದಿರುತ್ತಿದ್ದರೆ ಖಂಡಿತವಾಗಿ ನಾನು ಅಲ್ಲಿಗೆ ಹೋಗುತ್ತಿದ್ದೆನು.

ಬ್ಲೇಕ—ಬೇಡ, ನೀವಲ್ಲಿಗೆ ಹೋಗಲಾಗದು.

ಮೆಡೆಲಿನ್—ಮತ್ತೆ ನಾನಿಲ್ಲಿದ್ದು ಏನು ಮಾಡುವುದು? ಯಾವ ಬಗೆಯಲ್ಲಿಯೂ ನಾನು ನನ್ನ ಹೃದಯಕ್ಕೆ ಆಶ್ವಾಸನವೀಯಲಸಮರ್ಥಳಾಗಿರುವೆನು. ನೀವು ಏನು ಹೇಳುವಿರೋ ಹಾಗೆಯೇ ನಾನು ಮಾಡುವೆನು.

ಬ್ಲೇಕ—ನನಗಂತೂ ಏನು ಮಾಡಬೇಕೆಂಬುದು ತೋಚುವದಿಲ್ಲ.

ಮೆಡೆಲಿನ್—ಆದರಿನ್ನು ಹೆಚ್ಚಿಗೆ ಯೋಚಿಸಲಿಕ್ಕೆ ವೇಳೆ ಇಲ್ಲ. ಅವರನ್ನು ಗುಂಡಿನ ಬಾಯಿಗೀಯಲು ನಾಡದಿನ ತಾರೀಖೇ ನಿಶ್ಚಿತವಾಗಿದೆ. ನನ್ನ ಸ್ವಾಮಿಗೆ ಗುಂಡು ಹಾರಿಸಲ್ಪಡುವದೆಂಬುದು ನನಗೆ ತೀರಾ ಅಸಹ್ಯವಾದುದು. ನಾನೀ ರೀತಿ ಅವರನ್ನು ಕೊಲ್ಲಲು ಬಿಡುವುದಿಲ್ಲ. ಅವರು ನಿರ್ದೋಷಿಗಳು. ಅವರನ್ನು ರಕ್ಷಿಸುವೆ ನಾಳೆಯೇ ನಾನು ಬರ್ಲಿನಕ್ಕೆ ಹೋಗುವೆ. ಜರ್ಮನ್ ಸಮ್ರಾಟರ ಹತ್ತಿರ ನನ್ನ ಸ್ವಾಮಿಯ ಭಿಕ್ಷೆ ಬೇಡುವೆ. ಸಮ್ರಾಟರು ಸಹೃದಯ ಪುರುಷರು. ಈ ದುಃಖಿನಿಯ ಪ್ರಾರ್ಥನೆಯನ್ನು ಅಸ್ವೀಕರಿಸಲಾರರು.

ಬ್ಲೇಕ—ಆದರೆ ನಿಮ್ಮಿಂದ ಸಮ್ರಾಟರನ್ನು ನೋಡಲಾಗುವಂತಿಲ್ಲ. ಗಾಬರಿಗೊಂಡು ನೀವು ಕೆಲಸ ಹಾಳು ಮಾಡುವಿರಿ.

ಮೆಡೆಲಿನ್—ಆಗದು; ನಾಳೆ ನಾನು ಬರ್ಲಿನಕ್ಕೆ ಹೋಗುವೆನು. ದಯೆಯಿಟ್ಟು ನೀವೂ ನನ್ನ ಸಂಗಡ ಬರುವಿರಾ?

ಬ್ಲೇಕ—ನೀವಲ್ಲಿಗೆ ಹೋಗುವದು ಬೇಡ ಅಲ್ಲಿಗೆ ನಾನೊಬ್ಬನೇ ಹೋಗುವದು ಯುಕ್ತವು. ನಿಮಗೆ ನಾನು ವಿಶೇಷ ಆಶ್ವಾಸನೆಯನ್ನೇನೂ ಕೊಡಲಾರೆ; ಆದರೆ ಜರ್ಮನ್ ಸಮ್ರಾಟರಿಗೊಮ್ಮೆ ನಾನು ಸ್ವಲ್ಪಉಪಕಾರ ಮಾಡಿದ್ದೆನು; ಅದರಿಂದವರು ನನ್ನ ಮೇಲೆ ಕೃಪೆಯಿಟ್ಟಿರುವರು. ಆದುದರಿಂದ ಅವರನ್ನು ಸಂದರ್ಶಿಸಲು ನನಗೆ ಕಷ್ಟವಾಗದು. ನಾಳೆ ನಾವು ಬರ್ಲಿನಕ್ಕೆ ಹೋಗಿ ಅವರನ್ನು ಕಾಣುವೆ. ನಿಮ್ಮ ಸ್ವಾಮಿಯ ನಿರ್ದೋಷಿತೆಯನ್ನು ತಿಳಿಸುವೆ; ಹಾಗೂ ಇದರ ನಿಜವಾದ ಅಪರಾಧಿಯು ಲೆಫ್ಟನೆಂಟ ಹಿಲ್ಲರ್ಸನೇ ಎಂದು ಅರುಹುವೆ.

ಮೆಡೆಲಿನ್— ನೀವು ಒತ್ತಾಯಪಡಿಸಿದರೆ ಸಮ್ರಾಟರು ನನ್ನ ಸ್ವಾಮಿಯನ್ನು ಬಿಡುಗಡೆ ಮಾಡಲಾರರೆ?

ಬ್ಲೇಕ— ಅಷ್ಟನುಗ್ರಹವನ್ನವರು ತೋರಿಸುವರೋ ಇಲ್ಲವೋ ಹೇಳಲಾರೆ. ನಾನು ನನ್ನ ಶಕ್ತಿಮೀರಿ ನಿಮ್ಮ ಸ್ವಾಮಿಯ ಉದ್ಧಾರಕ್ಕಾಗಿ ಯತ್ನಿಸುವೆ; ಆದರೆ ಜಯಶೀಲನಾಗುವೆನೋ ಇಲ್ಲವೋ ದೇವರೇ ಬಲ್ಲ.

ಮೆಡೆಲಿನ್— ನಿಮ್ಮ ಮಾತನ್ನು ಕೇಳಿ ಖಂಡಿತವಾಗಿ ನನ್ನ ಸ್ವಾಮಿಯು ಪಾರಾಗಿ ಬರುವರೆಂದು ನನಗೆ ಕಾಣುತ್ತಿದೆ.

ಬ್ಲೇಕನೆದ್ದು ಸಾಮಾನುಗಳನ್ನಣಿಮಾಡತೊಡಗಿದನು. ತರುವಾಯ ಮೆಡೆಲಿನಳನ್ನು ಕುರಿತು ಹೇಳಿದನು:— ನಾನು ಇಂದು ರಾತ್ರಿ ಬಂಡಿಯಿಂದ ಬರ್ಲಿನಕ್ಕೆ ಪ್ರಯಾಣ ಬೆಳೆಸುವೆದು. ಬಂಡಿಗಿನ್ನು ಒಂದೇ ತಾಸು ತಡವಿದೆ.

ಮೆಡೆಲಿನ— ಮಹಾಶಯ! ಯಾವ ಶಬ್ದಗಳಿಂದ ಕೃತಜ್ಞತೆ ಪ್ರಕಟಿಸಲೆಂಬದು ನನಗೆ ಹೊಳೆಯುವದಿಲ್ಲ. ನಿಮ್ಮ ಋಣವನ್ನು ನಾನು ಇಡೀ ಜೀವನದಲ್ಲಿ ತೀರಿಸಲಾರೆನು. ಜರ್ಮನ್ ಸಮ್ರಾಟರನ್ನು ನೋಡಿದ ಬಳಿಕ ನನಗೊಂದು ತಂತೀ ಬಿಡಲಿಕ್ಕೆ ಸಮಯ ಸಿಕ್ಕೀತೇ?

ಬ್ಲೇಕ— ಒಳ್ಳೇದು. ತಂತಿ ಕಳುಹಿಸುವೆನು.

ಮೆಡೆಲಿನ— ನಿಮ್ಮ ತಂತಿಯು ದೊರೆಯುವವರೆಗೆ ಚಿಂತಿತಳಾಗಿರುವೆನು. ನನ್ನ ಸ್ವಾಮಿಯು ಕಳುಹಿದ ಪತ್ರಗಳ ಸಂಗ್ರಹವನ್ನು ನೀವು ಕೊಂಡು ಹೋಗಲಪೇಕ್ಷಿಸುತ್ತೀರೇನು?

ಬ್ಲೇಕ— ಅವಶ್ಯವಾಗಿ! ನಿಮ್ಮೊಂದಿಗೆ ನಿಮ್ಮ ಮನೆಗೆ ಬಂದು ನಾನು ಆ ಪತ್ರಗಳನ್ನು ತೆಗೆದುಕೊಳ್ಳುವೆನು.

ಒಡನೆ ಬ್ಲೇಕನು ಮೆಡೆಲಿನಳನ್ನು ಜೊತೆಗೆ ಕರೆದುಕೊಂಡು ಬಂಡಿಯನ್ನು ಹತ್ತಿದನು. ಮೆಡೆಲಿನಳು ತನ್ನ ಮನೆಯೊಳಗಿಂದ ಕಾಗದಗಳ ಕಟ್ಟೊಂದನ್ನು ತಂದು ಬ್ಲೇಕನ ಕೈಗಿತ್ತಳು. ಬಳಿಕ ಬ್ಲೇಕನು ಚಯರಿಂಗ ಕ್ರಶ್ ಸ್ಟೇಶನ್ನಿಗೆ ತೆರಳಿದನು. ಟಿಕೇಟು ಪಡೆದು ಫರ್ಸ್ಟಕ್ಲಾಸಿನಲ್ಲಿ ಹೋಗಿ ಕುಳಿತನು. ಬಂಡಿಯು ರೇವಿನ ಕಡೆಗೆ ಸಾಗಿತು.

ಹಡಗಿನಲ್ಲಿ ಕುಳಿತು ಬ್ಲೇಕನು ಯೋಚನೆಯಲ್ಲಿ ಮುಳುಗಿದನು:— ನಾನು ಜರ್ಮನ್ನ ಸಮ್ರಾಟರೊಂದಿಗೆ ಮಾತಾಡಿ ಪೋಲನ ಮರಣದಂಡನೆಯ ಆಜ್ಞೆಯನ್ನು ಹಿಂದೆಗೆಯಿಸಬಲ್ಲೆನೆ? ಒಂದು ವೇಳೆ ಅದನ್ನು

ರೆದ್ದುಗೊಳಿಸಲಾಗದಿದ್ದಲ್ಲಿ ಒಬ್ಬನ ಬದಲಿಗೆ ಇಬ್ಬರೂ ಸಾಯುವರು. ಈಶ್ವ ರನ ಇಚ್ಛೆಯು ಹೇಗಿದೆಯೋ ಹೇಳಲಾಗುವುದಿಲ್ಲ.

† ÷ * ÷ †

ಬ್ಲೇಕನು ಇಂಗ್ಲಂಡಿನಿಂದ ಬರ್ಲಿನಕ್ಕೆ ಯಾತ್ರೆ ಮಾಡಿದಂದು ಬುಧ ವಾರವಾಗಿದ್ದಿತು. ಮರು ದಿನ ಎಕ್ಸಪ್ರೆಸ್ಸು ಬರ್ಲಿನಕ್ಕೆ ತಲುಪುವ ಮುಂಚೆ ಫಕ್ಕನೆ ಮಳೆ ಸುರಿಯಹತ್ತಿತು. ಗುರುವಾರ ದಿನ ಇಡೀ ರಾತ್ರಿ ಮಳೆ ನಿಲ್ಲಲೂ ಇಲ್ಲ; ಗಾಳಿ ಕಡಿಮೆಯಾಗಲೂ ಇಲ್ಲ. ಶುಕ್ರವಾರ ಬೆಳಗ್ಗೆ ಈ ದುರ್ಘಟನೆಯಿಂದ ದೇಶಕ್ಕುಂಟಾದ ಕ್ಷತಿಯು ಸುಲಭವಾಗಿ ತುಂಬುವಂತಿ ರಲಿಲ್ಲ. ಆ ರಾತ್ರಿಯಲ್ಲಿ ಪ್ರಳಯವೇ ಆದಂತಾಯಿತು!

ಆ ಇರುಳಿನ ಬಿರುಗಾಳಿಯಲ್ಲಿ ಸಹಸ್ರಾರು ಪಶುಗಳು ಮಡಿದವು; ಅಸಂಖ್ಯ ವೃಕ್ಷಗಳು ಧರಾಶಾಯಿಗಳಾದುವು! ಇದರಿಂದ ಮಾರ್ಗಗಳು ಕಟ್ಟಾದುವು. ಒಂದೂರಿನಿಂದ ಇನ್ನೊಂದೂರಿಗೆ ಹೋಗುವುದು ಅಸಂಭವ ವಾಯಿತು. ಅದೆಷ್ಟೋ ಟ್ರೇನುಗಳು ಲೈನಿನಿಂದ ಕೆಳಕ್ಕುರುಳಿದುವು. ತಂತಿ ಹಾಗು ಟೆಲಿಫೋನಿನ ಹಲವಾರು ಕಂಬಗಳು ನೆಲಕ್ಕೊರಗಿದುವು ಬರ್ಲಿನ ದಿಂದ ಮೇಗಡೀವರ್ಗದ ವರೆಗೆ ಹಾಕಿಸಿದ್ದ ಟೆಲಿಫೋನಿನ ತಂತಿಯು ಕಡಿದು ತುಂಡಾದುದರಿಂದ, ಆ ಎರಡೂ ಸ್ಥಳಗಳ ನಡುವೆ ಸಮಾಚಾರಗಳು ಹೋಗಿ ಬರುವುದು ನಿಂತು ಹೋಯಿತು.

ಆದರೆ ಈ ದುರ್ಯೋಗದಿಂದ ಪೋಲನ ಮರಣದಂಡನೆಯ ಆದೇಶ ಪಾಲನೆಯಲ್ಲೇನೂ ಅಡಚಣೆಯುಂಟಾಗಲಿಲ್ಲ ದುರ್ಗದ ಹೊರಗೊಂದು ಬೃಹನ್ಮೈದಾನವಿದ್ದಿತು. ಅದೇ ಮೈದಾನದಲ್ಲಿ ಪೋಲನನ್ನು ಗುಂಡಿಗೆ ಕೊಡುವುದೆಂದು ನಿಶ್ಚಿತವಾಗಿದ್ದಿತು. ಮೈದಾನದಲ್ಲಿ ಬಹಳ ಮರಗಳು ಬಿದ್ದಿದ್ದುವು; ಕೂಲಿಗಳು ಕೆಲ ವೃಕ್ಷಗಳನ್ನು ಕಡಿದು ದೂರ ಪಡಿಸಿದ್ದರು. ಇದ ರಿಂದ ಮೈದಾನದ ಸ್ವಲ್ಪ ಭಾಗವು ಮಾತ್ರ ಬಿಡುವಾಗಿದ್ದಿತು.

ನಿಶ್ಚಿತ ವೇಳೆಗೆ ಒಬ್ಬ ಸಾಮರಿಕ ಅಧಿಕಾರಿಯು ಪಾದರಿಯೊಬ್ಬನನ್ನು ಸಂಗಡ ಕರೆದುಕೊಂಡು, ಬಂಧನದಲ್ಲಿದ್ದ ಪೋಲನೆದುರು ಬಂದು:—ಪೋಲ, ನಿನಗೆ ದಂಡನೆ ಕೊಡುವ ವೇಳೆ ಬಂದಿದೆ.

ಪೋಲನು ಧೀರಭಾವದಿಂದ:—ನಾನು ಸಿದ್ಧನಿರುವೆನು. ಬೇಗನೆ ಈ ವಿಡಂಬನೆಯನ್ನು ಕೊನೆಗಾಣಿಸಿರಿ.

ಬಳಿಕ ಆ ಅಧಿಕಾರಿಯು ಪೋಲನೆರಡೂ ಕೈಗಳನ್ನು ಬೆನ್ನಿಗೇರಿಸಿ, ತೊಗಲಿನ ಹಗ್ಗದಿಂದ ಬಲವಾಗಿ ಕಟ್ಟಿದನು. ಆ ಮೇಲಾತನನ್ನು ಕರೆದು ಕೊಂಡು ವಧ್ಯಭೂಮಿಯತ್ತ ನಡೆದನು.

ಅಕಸ್ಮಾತ್ ದುರ್ಗದ ಡಂಗುರದ ಸ್ವರ ಕೇಳಿಸಿತು. ಇದು ತನ್ನನ್ನು ಕೊಲ್ಲುವುದನ್ನು ಸೂಚಿಸುವ ನಗಾರಿಯ ಸದ್ದೆಂದು ಪೋಲನರಿತನು. ಆ ಶಬ್ದ ವನ್ನು ಕೇಳಿ, ರಾಜದ್ರೋಹಿಯ ಮರಣದಂಡನೆಯನ್ನು ನೋಡಲೋಸುಗ ಅನೇಕ ನಗರವಾಸಿಗಳು ಮೈದಾನದಲ್ಲಿ ಬಂದು ನೆರೆದರು.

ಪೋಲನು ತನ್ನೊಳಗೆ:—ಮರಣ ದಂಡನೆಯಲ್ಲಿ ಅಂಜಿಕೆಯಾದರೂ ಏನಿದೆ? ಮೃತ್ಯುಯಾತನೆಯಾದರೋ ನಿಮಿಷ ಮಾತ್ರವೇ ಇರುವಂತಹದು; ಆದರೆ ಮೆಡೆಲಿನಳು ನನ್ನ ನಿವೇದವನ್ನು ಗಣಿಸದೆ ವಧಸ್ಥಾನಕ್ಕೆ ಬಂದ ಳಾದರೆ, ನಾನು ಶಾಂತಿಯಿಂದ ಸಾಯಲಾರೆನು. ಉತ್ಕಂಠಿತಭಾವದಿಂದಾ ತನು ಒಮ್ಮೆ ಸುತ್ತಲೂ ಈಕ್ಷಿಸಿದನು. ಮೆಡೆಲಿನಳನ್ನೆಲ್ಲಿಯೂ ಕಾಣದೆ ಆತನು ತುಸು ನಿಶ್ಚಿಂತನಾದನು.

ಬಳಿಕ ಪೋಲನು ನಿರ್ದಿಷ್ಟ ಸ್ಥಳಕ್ಕೆ ಹೋಗಿ ನಿಂತನು. ಅವನ ಎಡಬಲಗಳಲ್ಲಿ ಸಾಮರಿಕ ಉದ್ಯೋಗಸ್ಥರು ಸಾಲುಗಟ್ಟಿ ನಿಂತಿದ್ದರು. ಬಂದೂಕಧಾರೀ ಪಡೆಯು ಅವನ ಮುಂದೆ ಬಂದು ನಿಂತಿತು. ಇನ್ನು ಎರಡು ನಿಮಿಷಗಳಲ್ಲಿ ಕೆಲಸವೆಲ್ಲ ತೀರುವುದೆಂದು ಪೋಲನೆಣಿಸಿದನು.

ಒಬ್ಬ ಸೈನಿಕನು ಬಟ್ಟೆಯಿಂದ ಪೋಲನ ಕಣ್ಣುಗಳಿಗೆ ಪಟ್ಟಿ ಕಟ್ಟ ಹತ್ತಿದನು. ಆಗ ಪೋಲನು:—ನನ್ನ ಕಣ್ಣುಗಳನ್ನು ಕಟ್ಟಬೇಡಿರಿ; ನನ್ನ ಕೈಗಳೆರಡನ್ನೂ ಬಿಚ್ಚಿರಿ. ನಾನು ವೀರನಂತೆ ಮೃತ್ಯುವನ್ನಾಲಿಂಗಿಸಿಕೊಳ್ಳು ವೆನು, ಎಂದು ಹೇಳಿದನು; ಆದರೆ ಅವನ ಈ ಪ್ರಾರ್ಥನೆಯು ಸ್ವೀಕೃತ ವಾಗಲಿಲ್ಲ.

ಪಾದರಿಸಾಹೇಬರು ಅವನ ಆತ್ಮಕಲ್ಯಾಣಕ್ಕಾಗಿ ಗಂಭೀರ ಸ್ವರದಿಂದ ಪ್ರಾರ್ಥನೆ ಮಾಡುತ್ತಿದ್ದರು. ಆ ಪ್ರಾರ್ಥನೆಯು ಪೋಲನಿಗೆ ಮೃತ್ಯು ಸಂಗೀತದಂತೆ ಭಾಸವಾಗುತ್ತಿದ್ದಿತು. ಹಠಾತ್ತಾಗಿ ಆತನಿಗೆ 'ಹುಶ್ ಹುಶ್' ಶಬ್ದವು ಕೇಳಿಸಿತು. ಜೊತೆಯಲ್ಲಿಯೇ ಸೇನಾಪತಿಯ ಆಜ್ಞೆಯಿಂದ ಸಾಲಾಗಿ ನಿಂತಿದ್ದ ಐವರು ಸೈನಿಕರು ಪೋಲನನ್ನು ಲಕ್ಷಿಸಿ ಬಂದೂಕುಗಳನ್ನು ಗುರಿ, ಯಿಟ್ಟರು. ಸೇನಾಪತಿಯು ಹೇಳಿದನು:—ಒಂದು,........

ಅಕಸ್ಮಾತ್ ದೂರದಿಂದೊಂದು ಶಬ್ದವು ಬಂದಿತು:—ನಿಲ್ಲಿರಿ-ನಿಲ್ಲಿರಿ; ಗುಂಡು ಹಾರಿಸಬೇಡಿರಿ. ನಾನು ಜರ್ಮನ್ ಸಮ್ರಾಟರ ದೂತನು.

ಪೋಲನು ಆದಾವ ಹುಶ್-ಹುಶ್ ಶಬ್ದವನ್ನಾಲಿಸಿದ್ದನೋ ಅದು ಮೊಟರಿನ ಸದ್ದಾಗಿದ್ದಿತು. ಬ್ಲೇಕನು ವಧ್ಯಭೂಮಿಯ ಸಮೀಪದಲ್ಲಿಯೇ ಮೊಟರಿನಿಂದಿಳಿದು, ಓಡಿ ಬರುತ್ತ:—'ನಿಲ್ಲಿರಿ-ನಿಲ್ಲಿರಿ, ಗುಂಡನ್ನು ಹಾರಿಸ ಬೇಡಿರಿ; ನಾನು ಜರ್ಮನ್ ಸಮ್ರಾಟರ ದೂತನು' ಎಂದು ಕೂಗಿದ್ದನು. ಆ ಮೇಲೆ ಕರ್ನಲ್ಲ ಗ್ಲೇಜನ ಕೈಯಲ್ಲೊಂದು ಮುದ್ರೆಯೊತ್ತಿದ ಲಕ್ಕೋಟೆ ಯನ್ನಿತ್ತು, ಆತನಂದನು:—ನೀವು ಈ ಆಜ್ಞಾಪತ್ರವನ್ನೋದದಲೆ ಗುಂಡು ಹಾರಿಸಲು ಅಪ್ಪಣೆ ಕೊಡಬೇಡಿರಿ.

ಕರ್ನಲ್ಲನು ಲಕ್ಕೋಟೆಯ ಮೇಲೆ ಸಮ್ರಾಟರ ಮುದ್ರೆಯನ್ನು ನೋಡಿ, ಸೈನಿಕರಿಗೆ ಗುಂಡು ಹಾರಿಸಲನುಮತಿಯನ್ನೀಯದೆ, ಆಜ್ಞಾಪತ್ರವನ್ನು ತೆರೆದು ನೋಡಿದನು. ತರುವಾಯ ಸ್ವತಃ ಪೋಲನಿದ್ದಲ್ಲಿಗೆ ಹೋಗಿ ಆತ ನನ್ನು ಬಂಧಮುಕ್ತಗೊಳಿಸಿ, ಹೇಳಿದನು:—ಪೋಲ, ನಿನಗೆ ಶುಭವಾರ್ತೆ ಯನ್ನು ತಿಳಿಸುತ್ತಿದ್ದೇನೆ. ಸಮ್ರಾಟರು ನಿನ್ನನ್ನು ಮರಣದಿಂದ ಬಿಡುಗಡೆ ಮಾಡಿ ಹತ್ತು ವರುಷಗಳವರೆಗೆ ಜೈಲಿನಲ್ಲಿಡಲು ಆಜ್ಞೆಯಿತ್ತಿರುವರು. ಯಾವುದಾದರೂ ದುರ್ಗದಲ್ಲಿ ನೀನು ೧೦ ವರ್ಷ ಕೈದಿಯಲ್ಲಿರತಕ್ಕದ್ದು.

ಪೋಲನಿಗೆ ಫಕ್ಕನೆ ಈ ಮಾತಿನಲ್ಲಿ ನಂಬುಗೆ ಹುಟ್ಟಲಿಲ್ಲ. ಭಲಾ! ಸಮ್ರಾಟರು ಅವನಂತಹ ತುಚ್ಛ ವ್ಯಕ್ತಿಯ ಮೇಲೆ ಅದೇಕೀ ರೀತಿ ದಯೆ ದೋರಿಯಾರು? ಕ್ಷಣ ಹೊತ್ತಿನಲ್ಲಿ ಅವನ ಹೃದಯವು ಗದ್ಗದವಾಯಿತು. ಹೇಳಿದ:—ದೇವಾ, ನಿನಗೆ ಧನ್ಯವಾದ! ಬ್ಲೇಕನು ಆತನನ್ನು ಎದೆಗಪ್ಪಿ ಕೊಂಡನು. ಕರ್ನಲ್ಲನ ಆಜ್ಞೆಗಾಗಿ ಸೈನಿಕರಲ್ಲಿಂದ ಹೊರಟು ಹೋದರು.

ಕರ್ನಲ್ಲನು ಬ್ಲೇಕನನ್ನು ಸಂಬೋಧಿಸಿ:—ಸಮ್ರಾಟರು ಅದೇನನ್ನು ಯೋಚಿಸಿ ಅಪರಾಧಿಯ ಮೇಲೆ ಕೃಪೆ ಮಾಡಿದರೆಂಬುದು ತಿಳಿಯಲಿಲ್ಲ; ಅಲ್ಲದೆ ಇನ್ನೊಂದು ವಿಷಯವನ್ನು ತಿಳಿಯಲು ನಾನು ಉತ್ಸುಕನಾಗಿರು ವೆನು. ನಿನ್ನೆಯ ಭಯಂಕರ ಉತ್ಪಾತದಲ್ಲಿ ಸಮ್ರಾಟರ ಈ ಆಜ್ಞಾಪತ್ರವನ್ನು ತೆಗೆದುಕೊಂಡು ಬರ್ಲಿನ್ನಿನಿಂದ ಇಷ್ಟು ದೂರ ನೀವು ಬಂದುದು ಹೇಗೆ?

ಬ್ಲೇಕನು ನಗುತ್ತ:—ನೀವು ಅನುಮಾನಿಸಿದುದು ಸರಿ. ನಿನ್ನೆಯ ಉಪದ್ರವವು ಅಂತಹದೇ ಆಗಿದ್ದಿತು. ಟ್ರೇನುಗಳು ಸಂಚರಿಸಲಿಕ್ಕೂ

ಉಪಾಯವಿರಲಿಲ್ಲ. ಇಂತಹ ಸ್ಥಿತಿಯಲ್ಲಿ ನಾನು ಹೇಗೆ ಇಲ್ಲಿಗೆ ಬಂದೆನೆಂಬು ದನ್ನು ಕೇಳಿದರೆ, ನೀವು ಖಂಡಿತವಾಗಿಯೂ ಅಚ್ಚರಿಗೊಳ್ಳುವಿರಿ. ನಿನ್ನೆ ಆಜ್ಞಾಪತ್ರವನ್ನು ತೆಗೆದುಕೊಂಡು ನಾನು ದರ್ಬಾರಿನಿಂದ ಹೊರಟಾಗ ಭಯಂಕರ ಬಿರುಗಾಳಿಯು ಬೀಸುತ್ತಿದ್ದಿತು. ಆಗ ಟ್ರೇನಾವುದೂ ಇದ್ದಿಲ್ಲ. ತಂತಿಯನ್ನೂ ಕಳುಹಲಾಗುವಂತಿದ್ದಿಲ್ಲ; ಏಕೆಂದರೆ ಮಾರ್ಗದಲ್ಲಿ ತಂತಿ ತುಂಡಾಗಿದ್ದಿತು. ಕೊನೆಗೊಂದು ಸ್ಪೆಶಲ್ ಟ್ರೇನನ್ನು ಗೊತ್ತು ಮಾಡಿ, ಅದರಿಂದ ಹೊರಟೆನು. ಲೈನಿನ ಮೇಲೆ ಅಲ್ಲಲ್ಲಿ ಮರಗಳು ಬಿದ್ದಿದ್ದವು. ಅವು ಗಳನ್ನು ಕಡಿದು ಲೈನಿನಿಂದ ತೇಲಿಸಲು ಸಾಕಷ್ಟು ವೇಳೆ ತಾಗಿತು. ಇಲ್ಲಿಂದ ಇಪ್ಪತ್ತು ಮೈಲು ದೂರದಲ್ಲಿ ಹಿಮವು ಗಡ್ಡೆ ಕಟ್ಟಿದ್ದಿತು. ಆ ಮಂಜು ಕರ ಗದ ಹೊರತು ಎಂಜಿನ್ನು ಮುಂದಕ್ಕೆ ಸಾಗಲಾರದೆಂದು ಡ್ರಾಯವ್ಹರನು ಹೇಳಿದನು; ಆದರೆ ಬೆಳಿಗ್ಗೆ ಇಲ್ಲಿ ಪೋಲನಿಗೆ ಪ್ರಾಣದಂಡನೆಯಾಗಲಿದ್ದಿತು. ಆದುದರಿಂದ ನಾನು ಪಕ್ಕದ ಊರಿಗೆ ಹೋದೆನು. ಬಹಳ ಯತ್ನಿಸಿದ ಮೇಲೆ ಅಲ್ಲೊಂದು ಕುದುರೆಯು ಬಾಡಿಗೆಗೆ ಸಿಕ್ಕಿತು. ಅದನ್ನು ಹತ್ತಿ ಕೊಂಡು ವೇಗದಿಂದ ಇತ್ತ ಹೊರಟೆನು. ಸ್ವಲ್ಪ ದೂರ ಬಂದ ಬಳಿಕ ಕುದುರೆ ಯಲ್ಲಿ ನಡೆಯುವ ಶಕ್ತಿ ಉಳಿಯಲಿಲ್ಲ. ಆದುದರಿಂದ ಅದನ್ನಲ್ಲಿಯೇ ಮರಕ್ಕೆ ಕಟ್ಟಿಹಾಕಿದೆನು. ಹತ್ತರಿನ ಊರಿನಲ್ಲಿ ಕೇಳಿದಾಗ ಈ ಸ್ಥಳವು ಅಲ್ಲಿಂದ ಹದಿನೈದು ಮೈಲು ದೂರದಲ್ಲಿದೆಯೆಂದು ಗೊತ್ತಾಯಿತು. ಕೂಡಲೆ ಅಲ್ಲಿ ದೊಂದು ಬಾಡಿಗೆಯ ಮೋಟರರನಿಂದ ಇಲ್ಲಿಗೆ ಬಂದೆನು.

ಕರ್ನಲ್ಲ— ಅರೆ ನಿಮಿಷ ತಡವಾಗಿದ್ದರೆ ನಿಮ್ಮ ಪರಿಶ್ರಮವೆಲ್ಲ ವ್ಯರ್ಥ ವಾಗುತ್ತಿದ್ದಿತು.

ಬ್ಲೇಕ—ದೇವರ ದಯೆಯಿಂದ ನನ್ನ ಶ್ರಮವು ವ್ಯರ್ಥವಾಗಲಿಲ್ಲ.

ಬ್ಲೇಕನು ಕರ್ನಲ್ಲನ ಕೈಯಲ್ಲೊಂದು ಕಾಗದವನ್ನಿತ್ತನು. ಆ ಕಾಗದ ದಲ್ಲಿ ಜರ್ಮನ್ ಸಮ್ರಾಟರು ಬ್ಲೇಕನಿಗೆ ಪೋಲನೊಂದಿಗೆ ಗುಪ್ತವಾಗಿ ಭೇಟಿ ಮಾಡಲು ಅನುಮತಿ ಕೊಟ್ಟಿದ್ದರು ಕರ್ನಲ್ಲನು ಆ ಕಾಗದವನ್ನು ಓದಿ, ಪೋಲನನ್ನು ಬ್ಲೇಕನಿಗೆ ಭೇಟಿ ಮಾಡಿಸಿದನು.

ಯಥಾ ಸಮಯಕ್ಕೆ ಸಮ್ರಾಟರ ಆಜ್ಞೆಯನ್ನು ತಂತಿಯ ಮೂಲಕ ಮೆಡೆಲಿನಳ ಬಳಿಗೆ ಕಳುಹಿಸಲಾಯಿತು. ಬ್ಲೇಕನು ತುಂಬ ಹೊತ್ತಿನ ವರೆಗೆ ಪೋಲನೊಂದಿಗೆ ಗುಪ್ತ-ಪರಾಮರ್ಶ ಮಾಡುತ್ತಲಿದ್ದನು. ಹಿಲ್ಡರ್ಸನ

ಒಳಸಂಚಿನಿಂದಲೇ ಪೋಲನಿಗೆ ಈ ಸಂಕಟವೆಂಬದು ಆತನಿಗೆ ತಿಳಿಯಿತು.

ಬ್ಲೇಕನು ಸಾಕ್ಷಿಗಾರರ ವಾಙ್ಮೂಲವನ್ನೋದಿದನು; ಆದರೆ ಅದ ರಿಂದೇನೂ ರಹಸ್ಯವು ಹೊರಪಡಲಿಲ್ಲ. ಸ್ವಲ್ಪ ಕಾಲ ಯೋಚಿಸಿದ ಬಳಿಕ ಬ್ಲೇಕನು:—ಕೆಲಸವು ಕಠಿಣವಿದ್ದಾಗ್ಯೂ ನಾನು ನಿಜವಾದ ಅಪರಾಧಿಯ ಅಪರಾಧವನ್ನು ಪ್ರಮಾಣಿತಗೊಳಿಸದೆ ಬಿಡೆನು. ನಾನೀಗ ಮೊದಲ ಜೇಲಿನಲ್ಲಿ ಜೂಲಿಯುಸನನ್ನು ಕಂಡು ಮಾತಾಡುವೆನು. ಆ ಮೇಲೆ ಏನ ಉಚಿತವಾಗಿ ತೋರುವುದೋ ಅದನ್ನು ಮಾಡುವೆನು.

ಪೋಲ—ನನ್ನನ್ನು ನಿರ್ದೋಷಿಯೆಂದು ಸಿದ್ಧಗೊಳಿಸಬಲ್ಲಿರಾ?

ಬ್ಲೇಕ—ಖಂಡಿತವಾಗಿ! ನೀನು ಯಾವುದನ್ನೂ ಚಿಂತಿಸಬೇಡ ಜೇಲಿನಲ್ಲಿ ನಿನ್ನೊಂದಿಗೆ ಇನ್ನು ಯಾವುದೇ ಪ್ರಕಾರದ ದುರ್ವ್ಯವಹಾ ಮಾಡಲ್ಪಡುವುದಿಲ್ಲವೆಂದು ಸಮ್ರಾಟರು ನನ್ನ ಎದುರು ಹೇಳಿರುವರು. ಜೇ ನಲ್ಲಿ ನೀನು ಸಾಧಾರಣ ಕೈದಿಯಂತೆ ಇಡಲ್ಪಡುವುದಿಲ್ಲ; ದುರ್ಗದ ಅಧಿಕಾ ಗಳು ಸಾಧಾರಣವಾದ ಅಪರಾರಾಧದಲ್ಲಿ ಯಾವ ಪ್ರಕಾರ ಇಡಲ್ಪ ವರೋ, ಅದೇ ಪ್ರಕಾರ ನೀನೂ ಇಡಲ್ಪಡುವಿ.

ಪೋಲ—ನಿಮ್ಮ ಅಪಾರ ಅನುಗ್ರಹಕ್ಕೆ ನಾನು ಚಿರಋಣಿಯಾಗಿ ವೆನು. ಮೆಡೆಲಿನಳೊಂದಿಗೆ ಭೇಟಿಯಾದಾಗ ಸೇವಾಕೆಯ ಹತ್ತಿರ ಹೇಳಿ ಹಾಗಲಿ. ಇಷ್ಟು ಹೇಳಿ, ಪೋಲನು ಸುಮ್ಮನಾದನು. ಬ್ಲೇಕನು ನಿಗೆ ಸಾಂತ್ವನೆಯಿತ್ತು ಅಲ್ಲಿಂದ ಹೊರಟನು.

---

## ಛದ್ಮವೇಷಧಾರಿ ಹಿಡಿಯಲ್ಪಟ್ಟ

ಎರಡು ವಾರಗಳ ಮೇಲೊಂದು ದಿನ ಹತ್ತು ತಾಸಿನ ಸಮಯ ಬ್ಲೇಕನು ತನ್ನ ಲಂಡನ್ನಿನ ಮನೆಯಲ್ಲಿ ಕುಳಿತಿದ್ದನು. ಇಂದು ಬೆಳಿ ಆತನು ಜರ್ಮನಿಯಿಂದ ತನ್ನ ಮನೆಗೆ ಬಂದಿದ್ದನು. ಸ್ಮಿತ್ರನು ಅ ಮುಂದುಗಡೆಯಲ್ಲಿ ಕುಳಿತಿದ್ದನು.

ಸ್ಮಿತ್ರ—ಪೋಲನ ನಿರ್ದೋಷಿತೆಯನ್ನು ಪ್ರಮಾಣಿತಗೊಳಿಸು ಸುಲಭವೇನು?

ಬ್ಲೇಕ—ಸುಲಭವೇನೂ ಅಲ್ಲ; ಆದರೆ ನಾನದರಲ್ಲಿ ಸಫಲವ ವುದು ನಿಶ್ಚಯ. ನನಗೀಗ ಮಾರ್ಗ ಸಿಕ್ಕಿಹೋಗಿದೆ.

ಸ್ಮಿತ್—ನೀವು ಏನೇನು ಮಾಡಿರುವಿರಿ?

ಬ್ಲೇಕ—ಇಷ್ಟರಲ್ಲಿ ವಿಶೇಷವೇನೂ ಮಾಡಿಲ್ಲ; ಆದರೂ ಹಿಲ್ಡರ್ಸನ ದುಷ್ಕರ್ಮದ ಫಲವಿದೆಂಬುದನ್ನು ನಾನು ನಿನಗೆ ಹೇಳಿಬಿಡುತ್ತೇನೆ. ಇದರ ಆಧಾರದ ಮೇಲೆಯೇ ನಾನು ಕೆಲಸಕ್ಕಾರಂಭಿಸಿರುವೆನು. ಮೇಗಡೀವರ್ಗದ ಕೋಟೆಯ ಅಧಿಕಾರಿಯೊಬ್ಬನು ಕೃತಕ ಗಡ್ಡ-ಮೀಸೆಗಳನ್ನಿಟ್ಟುಕೊಂಡು 'ಕಾಲೆಪ್ರೂಸ್' ಹೋಟೆಲ್ಲಿಗೆ ಹೋಗುತ್ತಿದ್ದನೆಂದೂ ಅಲ್ಲಿ ಸಾಮಾನ್ಯ ಮನುಷ್ಯರಿಬ್ಬರೊಂದಿಗೆ ಗುಪ್ತವಾಗಿ ಮಾತು-ಕತೆಗಳಾಡುತ್ತಿದ್ದನೆಂದೂ ನನಗೆ ಪತ್ತೆಯಾಗಿದೆ. ಅವರಿಬ್ಬರ ಆಕಾರಗಳನ್ನು ಕೇಳಿ ತಿಳಿದ ಮೇಲೆ ಜೂಲಿಯುಸ ನನ್ನು ನೋಡಲು ಹೋಗಿದ್ದೆನು ಹೋಟೆಲಿನೊಂದರಲ್ಲಿ ಮಾದಕದ್ರವ್ಯದಿಂದಾತನು ಮೂರ್ಛಿತನಾಗಿದ್ದ ದಿವಸ ಆ ಮನುಷ್ಯರಿಬ್ಬರೂ ಅದೇ ಹೊಟೆಲಿನಲ್ಲಿ ಕುಳಿತು ಮದ್ಯಪಾನ ಮಾಡುತ್ತಿದ್ದರೆಂದು ತಿಳಿದು ಬಂದಿತು. ಪತ್ತೆ ಮಾಡಿದ ಮೇಲೆ ಅವರಿಬ್ಬರೂ ರಷ್ಯದ ಬೇಹುಗಾರರೆಂದೂ ಅವರ ಮೇಲೆ ಜರ್ಮನ್ ಪೋಲೀಸರ ಕಠಿಣ ನಿರೀಕ್ಷಣೆಯಿದ್ದಿತೆಂದೂ ಸಹ ಗೊತ್ತಾಯಿತು. ಅವರಿಬ್ಬರೂ ಒಂದು ಹೋಟೆಲ್ಲಿನಲ್ಲಿ ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡು ಇರುತ್ತಿದ್ದರೆಂಬುದನ್ನು ನಾನು ತುಂಬಾ ಪರಿಶ್ರಮದಿಂದ ಗೊತ್ತುಹಚ್ಚಿದೆನು. ಅವರ ಕೋಣೆಯಲ್ಲಿ ನನಗೆ ಕೆಲವು ಸುಟ್ಟುಹೋದ ಕಾಗದಗಳು ಸಿಕ್ಕಿವೆ. ಆ ಕಾಗದಗಳಿಂದ ಖಂಡಿತವಾಗಿ ಅವರು ರಷ್ಯಾನಿವಾಸಿಗಳಾಗಿದ್ದರೆಂದು ನನಗೆ ಮನದಟ್ಟಾಯಿತು. ಕಾಗದದ ಆ ಚೂರುಗಳನ್ನು ಓದಿದಲ್ಲಿ ಆ ಇಬ್ಬರ ಹೆಸರುಗಳೂ ಗೊತ್ತಾಗಿವೆ. ಒಬ್ಬನ ಹೆಸರು ಸಾರ್ಜಿಯೆಂದು, ಇನ್ನೊಬ್ಬನ ಹೆಸರು ಅಲೆಕ್ಸಿಸನೆಂದು. ಅವರಿಬ್ಬರೂ ಲಂಡನ ಮಾರ್ಗವಾಗಿ ಮೇಗಡೀವರ್ಗಕ್ಕೆ ಹೋಗಿದ್ದರು. ಅವರ ರೂಪ-ಆಕೃತಿಯವರೇ ಆದ ಇಬ್ಬರು ಮನುಷ್ಯರು ಸ್ಟೀಮರಿನಿಂದ ಲಂಡನಕ್ಕೆ ಬಂದಿರುವರೆಂದು ಸ್ಟೀಮರ ಆಫೀಸಿನಿಂದ ಗೊತ್ತಾಯಿತು.

ಸ್ಮಿತ್—ಅವರಿಬ್ಬರು ಇಲ್ಲಿಗೆ ಬಂದು ಯಾವ ಸ್ಥಳದಲ್ಲಿ ತಂಗಿರುವರೆಂಬುದು ಗೊತ್ತಾಯಿತೇ?

ಬ್ಲೇಕ—ಇಲ್ಲ, ಇದುವರೆಗೂ ಅದು ಗೊತ್ತಾಗಲಿಲ್ಲ. ಅವರಿಬ್ಬರೂ ಹಿಲ್ಡರ್ಸನ ಒಳಸಂಚಿನಲ್ಲಿ ಸೇರಿರುವರೆಂದೂ ಹಿಲ್ಡರ್ಸನೇ ಅವರಿಗೆ ದುರ್ಗದ ನಕ್ಷೆಯನ್ನು ಕೊಟ್ಟಿದ್ದನೆಂದೂ ನಾನು ಅಭಿಪ್ರಾಯಪಡುತ್ತೇನೆ.

ಆ ದೇಹುಗಾರರು ನಿಜವಾದ ನಕ್ಷೆಯನ್ನು ಬಚ್ಚಿಟ್ಟುಕೊಂಡು, ಅದರ ನಕಲನ್ನು ತೆಗೆದು ಜೂಲಿಯುಸನ ಜೇಲಿನೊಳಗಿಟ್ಟಿರಬೇಕು. ವಿದೇಶೀ ಬೇಹುಗಾರರು ಲಂಡನ್ನಿನಲ್ಲಿ ಅದಾವ ಕಡೆಗೆ ಇರುತ್ತಾರೆಂಬುದು ನನಗೆ ಗೊತ್ತಿಲ್ಲದಿಲ್ಲ. ಒಂದು ವೇಳೆ ಅವರಲ್ಲಿಗೆ ಬಂದಿರಬಹುದಾದರೆ ನಕ್ಷೆಯು ಅವರ ಹತ್ತಿರವೇ ಇರಬಹುದು. ಏಕೆಂದರೆ, ಅದನ್ನವರು ಟಪಾಲಿನಿಂದ ಕಳಿಸಲಿಕ್ಕೂ ಇಲ್ಲ; ಅಥವಾ ಬೇರೆಯವರ ಕೈಯಲ್ಲಿ ಕಳುಹಿಸಲಿಕ್ಕೂ ಇಲ್ಲ. ನಕ್ಷೆ ಸಿಕ್ಕಿದ ಸಮಾಚಾರವನ್ನವರು ತಮ್ಮ ಅಧ್ಯಕ್ಷನಿಗೆ ಬರೆದಿರಬಹುದು. ಹಾಗಿದ್ದರೆ ಸೇಂಟ ಪೀಟರ್ಸಬರ್ಗದ ಯಾವನಾದರೊಬ್ಬ ಉಚ್ಚಾಧಿಕಾರಿಯು ಆ ನಕ್ಷೆಯನ್ನು ಕೊಂಡು ಹೋಗಲಿಕ್ಕೆ ಲಂಡನ್ನಿಗೆ ಬರುವನು. ಒಂದು ವೇಳೆ ಆ ನಕ್ಷೆಯು ನಮಗೆ ಪ್ರಾಪ್ತವಾದಲ್ಲಿ ಜರ್ಮನ್ ಸಮ್ರಾಟರ ಮುಂದೆ ಪೋಲನ ನಿರ್ದೋಷಿತೆಯನ್ನು ಪ್ರಮಾಣಿತಗೊಳಿಸಲು ವಿಲಂಬವಾಗದು. ಈಗ ನಾನೇನು ಮಾಡುವೆನೆಂಬುದನ್ನು ಬಲ್ಲೆಯಾ?

ಸ್ಮಿತ್ತ—ಮೊತ್ತಮೊದಲು ನೀವು ರಷ್ಯಾದ ರಾಜಧಾನಿಯಿಂದ ಯಾವನಾದರೂ ಉಚ್ಚಾಧಿಕಾರಿಯು ಲಂಡನ್ನಿಗೆ ಬರುವನೋ-ಇಲ್ಲವೋ ಎಂಬ ವಿಷಯುವನ್ನು ಗೊತ್ತುಹಚ್ಚುವಿರಿ.

ಬ್ಲೇಕ—ನಿಜ. ಈ ವಿಷಯುವನ್ನು ನಾನು ಸೇನಾವಿಭಾಗದ ಅಧ್ಯಕ್ಷಸರ ಹೆನ್ರಿ ಟೇಂಪ್ರರ್ಲಿಯವರನ್ನು ವಿಚಾರಿಸಿ ತಿಳಿಯುವೆನು ರಷ್ಯಾ ರಾಜಧಾನಿಯಲ್ಲಿರುವ ಅವನ ಗುಪ್ತಚರನು ಅವನಿಗೀ ಸಮಾಚಾರವನ್ನು ಅವಶ್ಯವಾಗಿ ಕಳುಹಿಸಿರಬಹುದು.

ಬಳಿಕ ಬ್ಲೇಕನು ಸುಮ್ಮನಾದನು. ಹಲವು ಮಿನಿಟುಗಳ ವರೆಗೆ ಚಿಂತಿಸಿದ ಬಳಿಕ ತಿರುಗಿ ಹೇಳಿದನು:—ಇಡೀ ರಾತ್ರಿ ನಿದ್ದೆಗೆಟ್ಟಿರುವನು. ಆದುದರಿಂದ ಈಗ ಸ್ವಲ್ಪ ಮಲಗಿಕೊಳ್ಳುವೆನು. ಆ ಮೇಲೆ ಸರ ಹೆನ್ರಿಯ ಬಳಿಗೆ ಹೋಗುವೆನು. ಮೆಡೆಲಿನಳನ್ನೂ............

ಸ್ಮಿತ್ತನು ನಡುವೇ ಬಾಯಿ ಹಾಕಿ:—ಹೌದು. ಅದನ್ನು ನಾನು ಮರೆತೇ ಬಿಟ್ಟೆನು. ಪೋಲನ ಹೆಂಡತಿಯು ಬೇನೆ ಬಿದ್ದಿದ್ದಾಳಂತೆ.

ಬ್ಲೇಕ—ನಿನಗೆ ಹೇಗೆ ಗೊತ್ತಾಯಿತು?

ಸ್ಮಿತ್ತ—ನಿನ್ನೆ ಡಾಕ್ಟರ ಕ್ಯಾನಿಂಗರು ಹೇಳುತ್ತಿದ್ದರು.

ಬ್ಲೇಕ—ಹಾಗಾದರಂತೂ ಈಗಲೆ ನಾನಲ್ಲಿಗೆ ಹೋಗಬೇಕು.

ಕೂಡಲೆ ಆತನು ಮೊಟರನ್ನೇರಿ ಮೆಡೆಲಿನಳ ಬಳಿಗೆ ಹೋದನು. ಅಲ್ಲಿ ಮೆಟ್ಟಿಲನ್ನೇರುತ್ತಿರುವಷ್ಟರಲ್ಲಿ ಮೇಲಿನಿಂದ ಡಾಕ್ಟರ ಕ್ಯಾನಿಂಗನು ಬರುತ್ತಿದ್ದವನು ಸಿಕ್ಕಿದನು. ಡಾಕ್ಟರನು ಬ್ಲೇಕನ ಕೈ ಹಿಡಿದುಕೊಂಡು ಲೈಬ್ರರಿಗೆ ಕರೆದೊಯ್ದು ಹೇಳಿದನು:—ನಾನು ಎನ್ನೆ ನಿಮ್ಮನ್ನು ಹುಡುಕಿಕೊಂಡು ಹೋಗಿದ್ದೆನು. ಪೋಲನಿಗಾಗಿ ನೀವು ಪಡುತ್ತಿರುವ ಕಷ್ಟವನ್ನು ಕೇಳಿ, ನಾನು ನಿಮ್ಮ ಭಕ್ತನಾಗಿರುವೆನು. ಮಿಸೆಸ್ ಪೋಲಳು ನಿಮ್ಮನ್ನು ನೋಡಲು ತುಂಬಾ ಆತುರಳಾಗಿರುವಳು.

ಬ್ಲೇಕ—ನಾನಿವತ್ತು ಬೆಳಗ್ಗೆ ಬಂದೆನು. ಮೆಡೆಲಿನಳ ಬೇನೆಯ ಸುದ್ದಿ ಕೇಳಿ ಇಲ್ಲಿಗೀಗ ಬಂದೆನು.

ಡಾಕ್ಟರ—ಪೋಲನ ವೃತ್ತಾಂತವೇನು? ಅದೇ ಸುದ್ದಿಯ ಮೇಲೆ ಮೆಡೆಲಿನಳ ಬೇನೆಯು ಪರಣಾಮವು ಅವಲಂಬಿಸಿಕೊಂಡಿದೆ.

ಬ್ಲೇಕ—ಅವನು ಹೆನೋವರ ಪ್ರದೇಶದ ಗ್ಲೇಜ ಎಂಬ ದುರ್ಗದಲ್ಲಿ ಬಂದಿಯಾಗಿರುವನು.

ಡಾಕ್ಟರ—ಅವನು ಬೇಗ ಬಿಡಲ್ಪಡುವ ಆಶೆಯೇನೂ ಇಲ್ಲವೆ?

ಬ್ಲೇಕ— ಈಗ ನಾನೇನೂ ಹೇಳಲಾರೆ. ಸಮ್ರಾಟರು ಅವನಿಗೆ ಹತ್ತು ವರ್ಷ ಕಾರಾಗೃಹವಾಸದ ಆಜ್ಞೆಯಿತ್ತಿರುವರು.

ಡಾಕ್ಟರ—ಹಾಗೆಂದಾದರೆ ಮಿಸೆಸ್ ಪೋಲಳ ಬದುಕಿನಾಶೆಯನ್ನು ಬಿಡಬೇಕಾಗುವುದು. ಕಾರಣವೇನೆಂದರೆ, ಈ ತರದ ಅನೇಕ ರೋಗಿಗಳನ್ನು ನಾನು ನೋಡಿರುವೆನು. ಹತ್ತು ವರ್ಷದ ವರೆಗೆ ಪತಿಯನ್ನು ಕಾಣಲಾರೆನೆಂಬುದನ್ನು ಆಕೆ ತಿಳಿದರೆ, ಗಾಬರಿಯಾಗುವಳು.

ಬ್ಲೇಕ—ಹಾಗಾದರೆ ಏನು ಮಾಡಬೇಕು?

ಡಾಕ್ಟರ—ಏನು ಹೇಳುವುದು? ಶರೀರದಲ್ಲೊಂದು ವೇಳೆ ಕಾಹಿಲೆಯಿದ್ದಿದ್ದರೆ ನಾನು ಮದ್ದು ಕೊಟ್ಟು ಖಂಡಿತ ಗುಣಪಡಿಸುತ್ತಿದ್ದೆ; ಆದರೆ ಈ ಮಾನಸಿಕ ವ್ಯಾಧಿಯನ್ನು ಹೋಗಲಾಡಿಸುವ ಶಕ್ತಿ ನನ್ನಲ್ಲಿಲ್ಲ. ಪೋಲನನ್ನು ನೋಡಿಯೇ ಅವಳು ನಿರೋಗಿಯಾಗಬಹುದು; ಅನ್ಯಥಾ ಅಸಂಭವ.

ಸ್ವಲ್ಪ ಹೊತ್ತು ಆಲೋಚಿಸಿ ಬ್ಲೇಕನು:—ಆಗಲಿ. ಹಾಗೆಯೇ ಆಗುವುದು.

ಡಾಕ್ಟರ—ಹಾಗೆಂದರೇನಾಗುವುದು?

ಬ್ಲೇಕ—ಆಕೆ ತನ್ನ ಪತಿಯನ್ನು ಕಾಣುವಳು. ನೀವಾಕೆಯ ಹತ್ತಿರ ಹೋಗಿ ನಿಮ್ಮ ಪತಿಯು ಜಾಮೀನಿನ ಮೇಲೆ ಬಿಡಲ್ಪಟ್ಟು, ನಿಮ್ಮನ್ನು ನೋಡಲು ಬರುತ್ತಲಿದ್ದಾನೆಂದೂ ಇವತ್ತು ಸಾಯಂಕಾಲದೊಳಗೆ ಆತ ಇಲ್ಲಿಗೆ ಬರುವನೆಂದೂ ಹೇಳಿರಿ.

ಡಾಕ್ಟರ— ಇದು ಸಾಧ್ಯವೇ?

ಬ್ಲೇಕ—ಪೋಲನು ಬರುವುದಿಲ್ಲ; ನಾನೇ ಆತನ ವೇಷದಲ್ಲಿ ಬರುವೆನು. ನಾನು ಪೋಲನಲ್ಲವೆಂದು ಮೆಡೆಲಿನಳು ತಿಳಿಯಲಾರಳು.

ಡಾಕ್ಟರ—ಎಷ್ಟು ಸಮಯದ ವರೆಗೆ ನೀವು ಮೆಡೆಲಿನಳ ಬಳಿಯಲ್ಲಿರುವಿರಿ? ಹೆಂಗಸೋರ್ವಳ ಬಳಿಗೆ ಅವಳ ಗಂಡನ ರೂಪ ಧರಿಸಿ ಹೋಗುವುದೆಂಬುದು ತೀರ ಗರ್ಹ್ಯ ಕಾರ್ಯವಾದಾಗ್ಯೂ, ಒಬ್ಬ ಸ್ತ್ರೀಯ ಜೀವವುಳಿಸುವ ಸಲುವಾಗಿ ಹೀಗೆ ಮಾಡುವುದು ಉಚಿತವೇ ಅನ್ನಿ.

ಬ್ಲೇಕ—ನಾನು ಎರಡು ತಾಸಿನವರೆಗೆ ಮೆಡೆಲಿನಳ ಹತ್ತಿರ ಇರುವೆನು. ಇದರಿಂದ ಸ್ವಲ್ಪವಾದರೂ ಪ್ರಯೋಜನವಾಗದೆ?

ಡಾಕ್ಟರ—ಯಥೇಷ್ಟ ಪ್ರಯೋಜನವಾಗುವುದು. ನೀವು ಆಕೆಗೆ ನನಗೆ ಶೀಘ್ರದಲ್ಲಿಯೇ ಜರ್ಮನಿಗೆ ಹಿಂದಿರಳಬೇಕಾಗಿದೆಯೆಂದೂ, ಈಗ ನನ್ನ ನಿರ್ದೋಷಿತೆಯು ಪ್ರಮಾಣಿತವಾಗಿ ಹೋಗಿರುವುದರಿಂದ, ಶೀಘ್ರದಲ್ಲಿಯೇ ನಾನು ಬಿಡುಗಡೆ ಹೊಂದುವೆನೆಂದೂ ಹೇಳಿರಿ. ಪೋಲನ ವೇಷ ಧರಿಸುವುದರಲ್ಲಿ ಜಯಶೀಲರಾಗಬಲ್ಲಿರಾದರೆ, ಮೆಡೆಲಿನಳ ಅರ್ಧ ಬೇನೆಯು ಇಳಿದು ಹೋಗುವುದು.

ಬ್ಲೇಕ—ಇದಕ್ಕಾಗಿ ನೀವು ಚಿಂತಿಸಬೇಕಾಗಿಲ್ಲ. ಹೆಂಗಸರ ಕಣ್ಣಿಗೆ ಬೂದಿ ಚೆಲ್ಲುವುದು ದೊಡ್ಡ ಕೆಲಸವಲ್ಲ; ಅದೂ ರಾತ್ರಿಯಲ್ಲಿ ಮತ್ತೂ ಸುಲಭ. ನಾನು ಬೇಕಾದರೆ ನಿಮ್ಮನ್ನು ಕೂಡ ಮೋಸಗೊಳಿಸಬಲ್ಲೆನು. ಆಗಲಿ. ನೀವೀಗಲೆ ಹೋಗಿ ಮೆಡೆಲಿನಳಿಗೀ ವಾರ್ತೆ ತಿಳಿಸಿರಿ

ಡಾಕ್ಟರನು ಒಳಗೆ ಹೋದನು. ಹತ್ತು ಮಿನೀಟಿನಲ್ಲಿ ತಿರುಗಿ ಬಂದು:—ಈ ಶುಭವಾರ್ತೆಯನ್ನು ಕೇಳುತ್ತಲೆ ಆಕೆಯು ಬಹಳ ಮಟ್ಟಿಗೆ ಗುಣಹೊಂದಿರುವಳು. ನಾನು ಆಕೆಗೆ ರಾತ್ರಿ ಎಂಟು ತಾಸಿಗೆ ನಿಮ್ಮ ಪತಿಯನ್ನು ಕಾಣುವಿರೆಂದಿರುವೆನು.

ಬ್ಲೇಕ—ಸರಿ. ನಾನದೇ ವೇಳೆಗೆ ಬರುವೆನು. ನೀವೂ ಬನ್ನಿರಿ.

ಬ್ಲೇಕನಲ್ಲಿಂದ ತನ್ನ ಮನೆಗೆ ಹೊರಟು ಹೋದನು. ಡಾಕ್ಟರ ಕ್ಯಾನಿಂಗನು ಸಂಜೆಗೆ ಪೋಲನ ಮನೆಗೆ ಬಂದು ನೌಕರರ ಹತ್ತರ ರಾತ್ರಿ ಎಂಟು ಗಂಟೆಗೆ ನಿಮ್ಮ ಯಜಮಾನರು ಬರುವರೆಂದು ಸೂಚಿಸಿದನು. ಆದುದರಿಂದ ಉಕ್ತ ಸಮಯಕ್ಕೆ ಪೋಲನು ಮನೆಯೊಳಗೆ ಹೋಗುತ್ತಿದ್ದುದನ್ನು ಕಂಡು ಆತನ ನೌಕರರಿಗೆ ಆಶ್ಚರ್ಯವಾಗಲಿಲ್ಲ. ಬಹಳ ಕಾಲದ ಪ್ರವಾಸದಿಂದ ಮನೆಗೆ ಹಿಂದೆರಳಿ ಬಂದ ಮನುಷ್ಯನು ಯಾವ ರೀತಿ ನಡೆದುಕೊಳ್ಳುವನೋ ಪೋಲನ ರೂಪವನ್ನು ತಳೆದಿದ್ದ ಬ್ಲೇಕನು ಅದೇ ಭಾವಭಂಗಿಯನ್ನು ಪ್ರದರ್ಶಿಸಿದನು; ಯಾರಿಗೂ ಅವನು ಪೋಲನಲ್ಲವೆಂದು ಸಂದೇಹ ಬರಲಿಲ್ಲ.

ಬ್ಲೇಕನು ನೆಟ್ಟಗೆ ಲೈಬ್ರರಿಗೆ ಹೋದನು. ಡಾಕ್ಟರ ಕ್ಯಾನಿಂಗನು ಅಲ್ಲಿ ಅವನನ್ನು ಪ್ರತೀಕ್ಷಿಸುತ್ತ ಕುಳಿತಿದ್ದನು. ಬ್ಲೇಕನ ಛದ್ಮವೇಷವನ್ನು ಧರಿಸುವ ನೈಪುಣ್ಯವನ್ನು ಕಂಡು ಡಾಕ್ಟರಸಾಹೇಬರು ತುಂಬಾ ಹರ್ಷಗೊಂಡರು.

ಬ್ಲೇಕ—ಈಗ ಮೆಡೆಲಿನಳ ದೇಹಸ್ಥಿತಿ ಹೇಗಿದೆ?

ಡಾಕ್ಟರ—ಈಗ ಬಹಳ ಚೆನ್ನಾಗಿದೆ. ಆಕೆ ಪೋಲನ ಆಗಮನ ನಿರೀಕ್ಷಿಸುತ್ತಿರುವಳು.

ಬ್ಲೇಕ— ಅವಳ ಕೋಣೆಯಲ್ಲಿ ಬಹಳ ಬೆಳಕಿದೆಯೇ?

ಡಾಕ್ಟರ—ಇಲ್ಲ, ಬಹಳವೇನೂ ಇಲ್ಲ; ಆದರೆ ವಿಶೇಷ ಮಂದವೂ ಇಲ್ಲ. ಇನ್ನು ನೀವು ನಡೆಯಿರಿ.

ಮೇಜಿನ ಮೇಲೊಂದು ದೀಪವು ಉರಿಯುತ್ತಿದ್ದಿತು. ಅದರ ಪಕ್ಕದಲ್ಲಿಯೇ ಹಾಸುಗೆಯ ಮೇಲೆ ಮೆಡೆಲಿನಳು ದಿಂಬಿಗೊರಗಿ ಕುಳಿತಿದ್ದಳು. ಜ್ವರ ಈಗಲೂ ಹಾಗೆಯೇ ಇದ್ದಿತು. ಆಕೆ ಆತುರ ಪೂರ್ಣ ದೃಷ್ಟಿಯಿಂದ ಬಾಗಿಲ ಕಡೆಗೆ ನೋಡುತ್ತಿದ್ದಳು. ಬ್ಲೇಕನನ್ನು ನೋಡುತ್ತಲೆ ಸ್ವಾಮಿಯು ಭ್ರಾಂತಿಯಿಂದ ಆಕೆಯು ಅವನನ್ನು ತಬ್ಬಿಕೊಳ್ಳಲು ಎರಡೂ ಕೈಗಳನ್ನು ಮುಂದೆ ಚಾಚಿ ಗದ್ಗದ ಸ್ವರದಲ್ಲಿ ನುಡಿದಳು:—ಪ್ರಿಯಾ, ನನ್ನ ಬಳಿಗೆ ಬಾ. ತುಂಬಾ ಪ್ರಾರ್ಥಿಸಿದ ಮೇಲೆ ನೀವು ನನಗೆ ಸಿಕ್ಕಿರುವಿರಿ. ನೀವಿಲ್ಲದೆ ನನಗೆಷ್ಟು ಕಷ್ಟವಾಯಿತೆಂಬುದು ದೇವರಿಗೇ ಗೊತ್ತಿದೆ.

ಬ್ಲೇಕನ ತುಸು ಮುಂದರಿದು ಹೇಳಿದನು:—ಮೆಡೆಲಿನಾ-ಪ್ರಾಣಾಧಿಕೇ! ನಿನ್ನ ಬೇನೆಯ ಸುದ್ದಿ ಕೇಳಿದೊಡನೆಯೇ ನಾನು ಬಂದಿರುವೆನು. ದೇವರ ದಯೆಯಿಂದ............

ಆದರೆ ಅವನ ಮುಖದ ಮಾತು ಮುಖದಲ್ಲಿಯೇ ಉಳಿಯಿತು. ಮೆಡೆಲಿನಳು ಗಟ್ಟಿಯಾಗಿ ಕೂಗಿಬಿಟ್ಟಳು. ಭಯಭೀತ ದೃಷ್ಟಿಯಿಂದ ಬ್ಲೇಕನ ಮುಖವನ್ನು ನೋಡುತ್ತ ಹೇಳಿದಳು:— ನೀನು ಯಾರು? ಖಂಡಿತವಾಗಿಯೂ ನೀನು ನನ್ನ ಸ್ವಾಮಿಯಲ್ಲ. ನಿನ್ನ ಕಂಠಸ್ವರ ಅವರಂತಿಲ್ಲ. ನಿಜವಾಗಿ ಹೇಳು, ನೀನು ಯಾರು?

ಕ್ಷಣ ಕಾಲ ಸುಮ್ಮನಿದ್ದು ಪುನಃ ಆಕೆ ಹೇಳಿದಳು:—ತಿಳಿದೆ; ನೀವು ಬ್ಲೇಕರು. ನಿಮ್ಮ ಹೊರತು ಇಂತಹ ಕೃತಕ ವೇಷಧರಿಸುವುದರಲ್ಲಿ ಬೇರಾರು ನಿಪುಣರಿರುವರು? ಆದರೆ ನಿಮ್ಮಿಂದ ನನ್ನನ್ನು ಮೋಸಗೊಳಿಸಲಾಗಲಿಲ್ಲ. ಪತಿಯ ಕೃತಕವೇಷವನ್ನು ಧರಿಸಿ ಪತಿಪ್ರಾಣೆಯಾದ ಪತ್ನಿಯನ್ನು ಯಾರೂ ಮೋಸಪಡಿಸಲಾರರೆಂಬುದನ್ನು ನೀವರಿತಿರುತ್ತಿದ್ದರೆ, ನನ್ನ ಹತ್ತಿರವೆಂದೂ ನೀವಿಂತಹ ಚಾತುರ್ಯವನ್ನು ತೋರಿಸುತ್ತಿರಲಿಲ್ಲ. ಇದೇಕೆ ನೀವು ನನ್ನೊಂದಿಗೆ ಇಂತಹ ನಿಷ್ಠೂರ ವ್ಯವಹಾರವನ್ನೆಸಗಿದಿರಿ? ಈ ರೀತಿಯಾಗಿ ಈ ಅಭಾಗಿನಿಯನ್ನು ವಂಚಿಸುವ ಉದ್ಯೋಗಗೆಯ್ಯುವುದು ನಿಮಗೆ ಯೋಗ್ಯವಾದ ಕೆಲಸವೇ? ಅಯ್ಯೋ! ನನ್ನ ಸ್ವಾಮಿಯು ಈಗಲೂ ಜೇಲಿನಲ್ಲಿ ಬಂಧಿತರಾಗಿರುವರು. ನೀವವರ ಗೆಳೆಯರು; ದಯಮಾಡಿ ಒಮ್ಮೆ ಅವರನ್ನಿಲ್ಲಿಗೆ ಕರೆತನ್ನಿರಿ. ತಡವಾದರೆ ನಾನು ಜೀವಿಸಲಾರೆ. ಮುಂದೆ ಅವಳಿಂದ ಮಾತಾಡಲಾಗಲಿಲ್ಲ. ದಿಂಬಿನ ಮೇಲೆ ತಲೆಯಿಟ್ಟು ಆಕೆ ತೇಕತೊಡಗಿದಳು.

ಬ್ಲೇಕನು ಲಜ್ಜಿತನಾಗಿ ಕೃತ್ರಿಮ ತೊಡಿಗೆಯನ್ನು ತೆಗೆದುಹಾಕಿ, ಕರವಸ್ತ್ರದಿಂದ ಪೌಡರವನ್ನೊರೆಸಿಕೊಂಡನು. ಬಳಿಕ ಮೆಡೆಲಿನಳ ಹತ್ತಿರ ಹೋಗಿ:—ಮಿಸೆಸ್ ಪೋಲ, ನನ್ನೀ ಅಪರಾಧವನ್ನು ಕ್ಷಮಿಸೋಣಾಗಲಿ. ಕೃತಕ ವೇಷವನ್ನು ಧರಿಸಿ ಹಿಡಿಯಲ್ಪಟ್ಟುದು ನನ್ನ ಜೀವನದಲ್ಲಿ ಇದೇ ಮೊದಲನೆಯ ಸಂದರ್ಭವು; ಆದರೆ ನಿಮ್ಮ ಮಂಗಲಕ್ಕಾಗಿಯೇ ನಾನು ಈ ಕೆಲಸ ಮಾಡಿದ್ದೆನು. ಯಾವ ತೆರದಲ್ಲಾದರೂ ನಿಮ್ಮನ್ನು ಪ್ರಸನ್ನಗೊಳಿಸಿದುದಾದರೆ, ನೀವು ರೋಗಮುಕ್ತರಾದೀರೆಂದು ಡಾಕ್ಟರರು ಹೇಳಿದ್ದರು. ಆದುದರಿಂದಲೇ ನಾನಿಂತು ಮಾಡಿದೆನು.

ಮೆಡೆಲಿನ— ನೀವು ಇದುವರೆಗೂ ನನ್ನ ಸ್ವಾಮಿಯ ನಿರ್ದೋಷಿತೆಯನ್ನು ಸಿದ್ಧಗೊಳಿಸುವ ಪ್ರಯತ್ನದಲ್ಲಿ ಮಗ್ನರಾಗಿರುವಿರೇನು?

ಬ್ಲೇಕ—ಹೌದು; ಬಹು ಬೇಗನೆ ನನಗೆ ಜಯ ದೊರೆಯುವುದು.

ಮೆಡೆಲಿನ—ಎಂದಿನೊಳಗೆ? ನಾನು ನನ್ನ ಪತಿಯನ್ನು ಎಂದು ಕಾಣ ಬಹುದು?

ಬ್ಲೇಕ—ಒಂದು ವಾರದೊಳಗೆ ನಾನು ನಿಮ್ಮ ಪತಿಯನ್ನು ಇಲ್ಲಿಗೆ ಕರೆತರುವೆನು.

ಮೆಡೆಲಿನ—ಇದೀಗ ನೀವನ್ನುವುದು ದಿಟವೆ?

ಬ್ಲೇಕ—ನನ್ನ ಮೇಲೆ ನಂಬುಗೆ ಇಡಿರಿ. ದಿಟವನ್ನೇ ನುಡಿಯುವೆ.

ಮೆಡೆಲಿನ—ಇದನ್ನು ಕೇಳಿ ನನಗೆ ತುಂಬಾ ಸಂತೋಷವಾಯಿತು. ಇನ್ನು ನಾನು ಬಹು ಬೇಗನೆ ಗುಣಹೊಂದುವೆನು.

ಅನಂತರ ಡಾಕ್ಟರ ಕ್ಯಾಸಿಂಗನು ಬ್ಲೇಕನೊಂದಿಗೆ ಲೈಬ್ರರಿಗೆ ಬಂದನು. ಆಗ ಡಾಕ್ಟರನು:—ಕೆಲಸ ಕೆಟ್ಟಿತು, ಎಂದೆಂದನು.

ಬ್ಲೇಕ—ಯಾವ ಕೆಲಸ?

ಡಾಕ್ಟರ—ನೀವಾಕೆಗೆ ಒಂದು ವಾರದೊಳಗೆಂದು ಸುಳ್ಳು ಅಶ್ವಾಸನೆ ಯನ್ನೇಕೆ ಕೊಟ್ಟಿರಿ?

ಬ್ಲೇಕ—ನೀವು ವ್ಯಸನಪಡುವುದು ಬೇಡ; ನಾನು ಸುಳ್ಳು ಅಶ್ವಾಸನೆ ಕೊಟ್ಟಿಲ್ಲ.

ಡಾಕ್ಟರ—ಆದರೆ ಇಷ್ಟು ಅಲ್ಪ ಸಮಯದಲ್ಲಿ ಈ ಕೆಲಸವಾಗುವುದು ಹೇಗೆ?

ಬ್ಲೇಕ—ಅಸಾಧ್ಯವೇಕಾಗುವುದು? ಜರ್ಮನಿಗೆ ಹೋಗಿ ನಾನಾತ ನನ್ನು ಕರೆತರುವೆನು.

ಡಾಕ್ಟರ—ಒಂದು ವಾರದೊಳಗೆ ನೀವು ಮರಳಿ ಬರುವಿರೋ?

ಬ್ಲೇಕ—ಅದರೊಳಗೂ ಬರಬಲ್ಲೆ; ಹೆಚ್ಚಿಗೆ ವಿಳಂಬವಾದಲ್ಲಿ ಒಂದು ವಾರ ಹಿಡಿಯುವುದು.

ತರುವಾಯ ಬ್ಲೇಕನು ಡಾಕ್ಟರನನ್ನು ಬೀಳ್ಕೊಂಡು ತನ್ನ ಮನೆಗೆ ಬಂದನು. ಒಡನೆ ಟ್ರೇಝುರಿಯ ಬಾಗಿಲ ತೆರೆದು, ನೋಟಿನ ಕಟ್ಟೊಂದನ್ನು ತೆಗೆದು ಬ್ಯಾಗಿನೊಳಗಿಟ್ಟುಕೊಂಡನು. ಇದನ್ನು ಕಂಡು ಸ್ಮಿತ್ತನು ಪ್ರಶ್ನಿಸಿ ದನು:—ಇಷ್ಟು ಹಣವನ್ನು ತೆಗೆದುಕೊಂಡು ಎತ್ತ ಹೋಗುವಿರಿ?

ಬ್ಲೇಕ—ಜರ್ಮನಿಗೆ. ಅಷ್ಟರೊಳಗೆ ನೀನಿಲ್ಲಿ ನನ್ನ ಕಥನಾನುಸಾರ ರಷ್ಯದ ಆ ಇಬ್ಬರು ಬೇಹುಗಾರರನ್ನು ಪತ್ತೆ ಹಚ್ಚು.

ಸ್ಮಿತ್ರ— ನಿಮ್ಮಾಣತಿಯನ್ನು ಯಥಾಶಕ್ತಿ ಪಾಲಿಸುವೆನು; ಆದ ನೀವಿಷ್ಟು ತೊಂದರೆಯಿಂದ ಜರ್ಮನಿಗೆ ಹೋಗುವ ಕಾರಣ?

ಬ್ಲೇಕ—ಗ್ಲೇಜ ದುರ್ಗದಿಂದ ಪೋಲನನ್ನು ಕರೆತರುವ ಉದ್ದಿಶ್ಯ ಇದರಲ್ಲಿ ಸಫಲನಾಗದಿದ್ದಲ್ಲಿ ಅವನ ಹೆಂಡತಿಯ ಪ್ರಾಣರಕ್ಷಣೆಯಾಗದು.

---

## ಪುನರ್ಮಿಲನ

ಗ್ಲೇಜವು ಹೆನೋವರ ಪ್ರದೇಶದ ಚಿಕ್ಕದೊಂದು ನಗರ. ಅದರ ಜ ಸಂಖ್ಯೆಯು ಆ ಸಮಯದಲ್ಲಿ ೧೨೦೦೦ಕ್ಕಿಂತ ಅಧಿಕವಿರಲಿಲ್ಲ. ನಗರ ನಾಲ್ದಿಕ್ಕುಗಳಲ್ಲಿಯೂ ಸುತ್ತು ಗೋಡೆಯಿದ್ದಿತು. ಗೋಡೆಗೆ ಮಧ್ಯ ಮ ದಲ್ಲಿ ಬಾಗಿಲುಗಳಿದ್ದವು. ಹಗಲು-ರಾತ್ರಿ ಆ ಬಾಗಿಲುಗಳಲ್ಲಿ ಕಾವಲಿದ್ದಿತ ಈ ನಗರ ಮಧ್ಯದಲ್ಲಿ ಎತ್ತರವಾದೊಂದು ಸ್ಥಳದಲ್ಲಿ ದುರ್ಗವು ನಿರ್ಮ ವಾಗಿದ್ದಿತು.

ಪೋಲನು ಇದೇ ದುರ್ಗದಲ್ಲಿಡಲ್ಪಟ್ಟಿದ್ದನು; ಆದರೆ ಅಲ್ಲವನು ಇತ ಸಾಮಾನ್ಯ ಕೈದಿಗಳಂತಿರಬೇಕಿರಲಿಲ್ಲ. ಇರಲಿಕ್ಕವನಿಗೆ ವಿಶಾಲವಾದುದೊಂ ಕೋಣೆಯನ್ನು ಕೊಡಲಾಗಿದ್ದಿತು. ಆ ಕೋಣೆಯಲ್ಲಿ ಮೇಜು, ಕುಚಿ ಮಂಚ ಮತ್ತು ನಿತ್ಯವ್ಯವಹಾರದ ಇನ್ನೂ ಹಲವು ವಸ್ತುಗಳಿದ್ದು ದುರ್ಗದ ಅಧ್ಯಕ್ಷನು ಪೋಲನಿಗೆ ಬಹಳ ಮಟ್ಟಿಗೆ ಸ್ವಾತಂತ್ರ್ಯವನ್ನಿತ್ತಿದ್ದ ಪೋಲನು ನಗರದಲ್ಲಿ ಸುತ್ತಾಡಲು ತಡೆಯಿಲ್ಲದೆ ಹೋಗಬೇಕಾಗಿದ್ದಿ ಆದರೆ ಓಡಿ ಹೋಗಲು ಹವಣಿಸಿದನೆಂದರೆ ಕಠಿಣ ದಂಡನೆಯನ್ನು ಸಲು ಆಜ್ಞೆಯಾಗಿದ್ದಿತು.

ಗ್ಲೇಜಿನಲ್ಲಿ ಯಾವುದೇ ತರದ ಅನಾನುಕೂಲತೆಯಿಲ್ಲದಿದ್ದರೂ ನಿಜ ತೆಯ ಕಾರಣ ಪೋಲನಿಗೆ ಬಹಳ ಕಷ್ಟವೆನಿಸುತ್ತಿದ್ದಿತು. ದೇಶದ್ರೋ ಕೈದಿಯಾದುದರಿಂದ, ಎಲ್ಲರೂ ಆತನನ್ನು ತಿರಸ್ಕರಿಸುತ್ತಿದ್ದರು. ಇದರಿ ಅವನಿಗೆ ಮತ್ತಿಷ್ಟು ದುಃಖವಾಗುತ್ತಿದ್ದಿತು.

ಮನಸ್ಸಿನಲ್ಲಿಯೂ ಆತನಿಗೆ ಸುಖವಿರಲಿಲ್ಲ. ಅವನ ಸಂಪತ್ತನ್ನ ವನ್ನೂ ಸರಕಾರವು ವಶಪಡಿಸಿಕೊಂಡಿದ್ದಿತು. ಹತ್ತುವರ್ಷದೊ ಇಂಗ್ಲಂಡಕ್ಕೆ ಹಿಂದಿರುಗುವ ಆಶೆಯೇ ಆತನಿಗಿರಲಿಲ್ಲ.

ಒಂದು ದಿನ ಮೂರನೆಯ ಪ್ರಹರದಲ್ಲಿ ಕೆಲವರು ಹೊಟೆಲ್ ಒ

ರಲ್ಲಿ ಕುಳಿತು ಹಸಿವು ನಿವಾರಿಸಿಕೊಳ್ಳುತ್ತಿದ್ದುದನ್ನು ಪೋಲನು ನೋಡು ತ್ತಿದ್ದನು. ಅವರ ಆಮೋದ-ಪ್ರಮೋದಗಳನ್ನು ನೋಡಿ ಪೋಲನಿಗೆ ತನ್ನ ಬಾಳ್ವೆಯಲ್ಲಿ ತುಂಬಾ ಬೇಸರ ತೋರಿತು. ಪತ್ನಿಯು ನೆನವಾಗುತ್ತಲೆ ಅವನ ಕಂಗಳಿಂದ ಕಂಬನಿ ಸೂಸತೊಡಗಿತು. ಎರಡೂ ಕೈಗಳಿಂದ ಮೊಗ ಮುಚ್ಚಿ ಕೊಂಡು ಆತನು ಮೇಜಿನ ಬಳಿ ಬಹಳ ಹೊತ್ತಿನವರೆಗೆ ಕುಳಿತಿದ್ದನು.

ತಲೆಯೆತ್ತಿ ನೋಡಿದಾಗ ಮೇಜಿನ ಮೇಲೊಂದು ಕಾಗದ ಬಿದ್ದಿತ್ತು. ಪೋಲನು ಕೂಡಲೆ ಕಾಗದವನ್ನು ತೆಗೆದು ನೋಡಿದನು. ಅದರಲ್ಲಿ ಪೆನ್ಸಿಲ್ಲಿ ನಿಂದ ಹೀಗೆ ಬರೆದಿದ್ದಿತು:—ಪ್ರಿಯ ಪೋಲ, ನಿನ್ನ ಗೆಳೆಯನೊಬ್ಬನು ನಿನ್ನನ್ನು ಭೆಟ್ಟಿಯಾಗಲು ಬಹಳ ಉತ್ಸುಕನಾಗಿರುವನು. ಇಂದು ಸಂಜೆಗೆ ನಗರದ ಉತ್ತರ ದಿಕ್ಕಿನ ಗೋಡೆಯ ಹತ್ತಿರ ಸಿಗರೇಟಿನ ಅಂಗಡಿಯಲ್ಲಿ ಎಮಿಲ ಟೂನರನನ್ನು ಹುಡುಕುವದು.

ಪತ್ರದಲ್ಲಿ ಯಾರ ಹೆಸರೂ ಬರೆದಿರಲಿಲ್ಲ. ಪತ್ರವೇನೋ ಅವನಿಗೇ ಆಗಿದ್ದಿತು; ಆದರೆ ಬರೆದವರು ಯಾರು? ಇಲ್ಲಿ ಆತನನ್ನು ನೋಡಲುತ್ಸುಕ ನಾಗಿರುವಂತಹ ಸ್ನೇಹಿತನಾವನಿರುವನು? ಆತನನ್ನು ಹೊಸ ಸಂಕಟಕ್ಕೆ ಸಿಲುಕಿಸಲು ಹಗೆಯ ಒಳಸಂಚೇನೂ ಅಲ್ಲ ತಾನೆ? ಬಹಳ ಹೊತ್ತಿನವರೆಗೆ ಯೋಚಿಸಿದರೂ ಏನು ಮಾಡಬೇಕೆಂಬುದನ್ನು ಪೋಲನು ಸ್ಥಿರಪಡಿಸಲಾರ ದಾದನು ಅಂತೂ ಕೊನೆಗೆ ನನ್ನ ಭಾಗ್ಯದಲ್ಲಿ ಬರೆದಂತಾಗುವುದೆಂದೂ ಸಿಗ ರೇಟನಂಗಡಿಗೆ ಹೋಗುವುದಗತ್ಯವೆಂದೂ ಆತನು ನಿಶ್ಚೈಸಿದನು.

ಮೆಲ್ಲಮೆಲ್ಲನೆ ಸಂಧ್ಯಾಕಾಲವಾದಂತಾಯಿತು. ದುರ್ಗದ ನಿಯಮದ ಮೇರೆಗೆ ಸಂಜೆಯಾಗುವ ಮುಂಚೆಯೇ ಅವನು ದುರ್ಗದೊಳಗೆ ಹೋಗು ವುದು ಅವಶ್ಯವಾಗಿದ್ದಿತು. ಪೋಲನು ಗಂತವ್ಯ ಸ್ಥಾನದತ್ತ ನಡೆದನು. ಸಿಗ ರೇಟಿನ ಅಂಗಡಿಯನ್ನು ತಲುಪಲು ಅವನಿಗೆ ವಿಲಂಬವಾಗಲಿಲ್ಲ.

ಪ್ರೌಢ ಸ್ತ್ರೀಯೊಬ್ಬಳು ಅಲ್ಲಿ ಅಂಗಡಿಯನ್ನು ನಡೆಸುತ್ತಿದ್ದಳು. ಪೋಲನು ಅಂಗಡಿಯನ್ನು ಹೊಕ್ಕು ಎಮಿಲ ಟೂನರನನ್ನು ಕೇಳಿದನು. ಸ್ತ್ರೀಯು ಹಿಂಗ ಡೆಯೊಂದು ಮೆಟ್ಟಲನ್ನು ತೋರಿಸಿ, ಮಹಡಿಗೆ ಹೋಗಲು ಹೇಳಿದಳು.

ಮೇಲೆ ಹೋಗಿ ಪೋಲನು ಸಣ್ಣದೊಂದು ಕೊಟಡಿಯನ್ನು ನೋಡಿ ದನು. ಅದರ ಬಾಗಿಲು ಇಕ್ಕಿತ್ತು. ಬಾಗಿಲನ್ನು ನೂಕುತ್ತಲೆ ಅದು ತೆರೆ ಯಿತು. ಒಳಗೊಬ್ಬ ಸಭ್ಯ ಜರ್ಮನ್ ಪುರುಷನು ಕುರ್ಚಿಯ ಮೇಲೆ

ಕುಳಿತು ಧೂಮ್ರಪಾನ ಮಾಡುತ್ತಿದ್ದನು. ಪೋಲನು ಆತನನ್ನು ಕುರಿತು:- ನಾನು ಎಮಿಲ ಟೊನರರನ್ನು ನೋಡ ಬಂದಿರುವೆನು; ಅವರೆಲ್ಲಿರುವರು?

ಆ ಮನುಷ್ಯನು:—ನನ್ನ ಹೇಸರೇ ಅದು ನನ್ನನ್ನು ನಿಮ್ಮಿಂದ ಗುರತಿಸಲಾಗಲಿಲ್ಲವೆ?

ಪೋಲನು ಬೆರಗಾಗಿ ನುಡಿದನು:—ಸಂಭವತಃ ನಾನು ನಿಮ್ಮನ್ನು ಕಂಡಿಲ್ಲ.

ಟೊನರ—ನಿಮ್ಮ ಸ್ಮರಣ ಶಕ್ತಿಯು ಲುಪ್ತವಾಗಿ ಹೋಯಿತೇ? ಆಗಲಿ. ಈಗಲೆ ನಾನು ನಿಮಗೆ ನೆನಪು ಮಾಡಿಕೊಡುತ್ತೇನೆ. ದಯೆಯಿಟ್ಟು ಮೊದಲು ನೀನು ಆ ಕಪಾಟಿನೊಳಗಿಂದ ನನ್ನ ಕೋಟನ್ನು ತಗೆದುಕೊಡು. ಅದರಲ್ಲಿ ನನ್ನ ಹೊಗೆಸೊಪ್ಪಿನುಂಡೆಯಿದೆ. ಕೈನೀಡುತ್ತಲೆ ನಿನಗದು ಸಿಗುವುದು. ನನಗಾದರೆ ಏಳಬೇಕಾಗುತ್ತದೆ.

ಈ ವಿಚಿತ್ರ ವ್ಯವಹಾರದಿಂದ ಪೋಲನಿಗೆ ಬಲು ಸೋಜಿಗವೆನಿಸಿತು. ಆದರೂ ಕೋಟಿನ ಕಡೆಗೆ ತಿರುಗಿ ಕೈಚಾಚಿ, ಕೋಟನ್ನು ತೆಗೆದುಕೊಂಡು ಆತನು ಹಿಂದಕ್ಕೆ ತಿರುಗುತ್ತಲೇ, ಟೊನರನ ಸ್ಥಳದಲ್ಲಿ ಮಿ. ಬ್ಲೇಕನನ್ನು ನೋಡಿದನು! ಬ್ಲೇಕನು ಕ್ಷಣಮಾತ್ರದಲ್ಲಿ ತನ್ನ ಕೃತ್ರಿಮ ತೊಡುಗೆಯನ್ನು ತೆಗೆದುಹಾಕಿದ್ದನು!

ಬ್ಲೇಕನು ನಕ್ಕು:—ಈಗಲಾದರೂ ನೀನು ಪ್ರಾಯಶಃ ಗುರತಿಸಬಹುದಲ್ಲವೆ?

ಪೋಲನು ವಿಸ್ಮಯಾನ್ವಿತನಾಗಿ:—ನಿಮಗಿನ್ನೂ ನನ್ನ ನಿರ್ದೋಷಿತೆಯನ್ನು ತೋರಿಸಲಾಗಲಿಲ್ಲವೇ? ತೋರಿಸಲಾಗುತ್ತಿದ್ದರೆ ನೀವಿಂದು ಕೃತಕ ವೇಷವನ್ನು ಧರಿಸುವ ಅಗತ್ಯ ಬೀಳುತ್ತಿರಲಿಲ್ಲ.

ಬ್ಲೇಕ—ನೀನು ಹೇಳಿದುದು ಸರಿ; ಈಗ ನಾನು ನಿನ್ನನ್ನು ಕರೆದೊಯ್ಯಲು ಬಂದಿರುವೆನು ನನ್ನ ಜೊತೆಗೆ ಇಂಗ್ಲಂಡಕ್ಕೆ ಹೊರಡು.

ಪೋಲ—ನಾನಿಲ್ಲಿಂದ ಓಡಿಹೋಗುವದಸಂಭವ.

ಬ್ಲೇಕ—ನಿನ್ನ ಹಿಂದೆ ಪಹರೆಯುವನಿರುವನೇನು?

ಪೋಲ—ಇಲ್ಲ, ಆದರೆ ಓಡಲಿಕ್ಕಾವ ಉಪಾಯವೂ ಇಲ್ಲ; ನಾನು ಓಡುವುದೂ ಇಲ್ಲ. ನಾನು ಓಡುವುದನ್ನು ಪಹರೆಯುವರು ಕಂಡರೆ, ತತ್ಕ್ಷಣವೇ ಕೈದು ಮಾಡಿಬಿಡುವರು. ಇದರಲ್ಲಿ ಒಂದಿಷ್ಟೂ ಸಂಶಯವಿಲ್ಲ.

ಬ್ಲೇಕ—ಓಡಿಹೋದುದನ್ನು ನೋಡಿದಲ್ಲವೆ ಕೈದು ಮಾಡುವುದು? ನಾನವರ ಕಣ್ಣಿಗೆ ಮಣ್ಣೆರಚಿದರೆ? ನಿನ್ನನ್ನು ನನ್ನ ಜೊತೆಗೆ ಕರೆತರುವೆನೆಂಬು ಪ್ರತಿಜ್ಞೆ ಮಾಡಿಯಾಗಿದೆ. ನನ್ನ ಪ್ರತಿಜ್ಞೆಯು ಹುಸಿಯಾಗಲಾರದು. ನಾನು ಜರ್ಮನ್ ವೇಷದಲ್ಲಿ ಇಲ್ಲಿಗೆ ಬಂದು ಇಂದಿಗೆ ಮೂರು ದಿನವಾಯಿತು. ಇಲ್ಲಿಯೇ ನಾನು ತಂಗಿರುವೆನು. ಕಾರಣವೇನೆಂದರೆ, ಇಲ್ಲಿಂದ ನಿನ್ನನ್ನು ಹಾರಿಸಲು ಸುಲಭವಾಗುವುದು ಈ ಮನೆಗೆ ತಾಗಿರುವ ಗೋಡೆಯಿಂದ ಕೆಳಗಿಳಿಯಲು ಬಲವಾದ ಹಗ್ಗವನ್ನು ನಾನು ಸಂಗ್ರಹಿಸಿರುವೆನು. ಅದರ ಸಹಾಯದಿಂದ ಕೆಳಗಿಳಿಯುವೆವು. ಗೋಡೆಯ ಸಮೀಪದಲ್ಲಿಯೇ ಒಂದು ಮರದ ಗೆಲ್ಲು ಸಹ ಇದೆ. ಅದನ್ನು ಹಿಡಿದುಕೊಂಡು ಕೆಳಕ್ಕಿಳಿಯಬಹುದು. ಸ್ವಲ್ಪೇ ದೂರದಲ್ಲೊಂದು ಮೋಟರು ನಿಂತಿದೆ. ಅದನ್ನೇರಿ ನಾವು ಬಂದರಕ್ಕೆ ಹೋಗುವೆವು. ಆ ಮೇಲೆ ಅಲ್ಲಿ ನಿಂತಿರುವ ನನ್ನ ಹಡಗವನ್ನೇರಿ ಇಂಗ್ಲಂಡವನ್ನು ಸೇರುವೆವು

ಪೋಲ—ನಿಮ್ಮ ಸಾಹಸವು ವಿಚಿತ್ರವಾದುದು; ಆದರೆ ರಾತ್ರಿ ಒಂದು ತಾಸಿನೊಳಗಾಗಿ ದುರ್ಗದ ಕಾವಲಿನವರಿಗೆ ನಾನು ಓಡಿ ಹೋದ ಸಂಗತಿ ಗೊತ್ತಾಗುವುದು. ಆ ಮೇಲವರು ತಂತಿಮೂಲಕ ನಾಲ್ಕೂ ಕಡೆಗೆ ಸುದ್ದಿ ಕಳುಹಿಸುವರು. ಒಂದು ತಾಸಿನೊಳಗೆ ನಾವು ಬಹಳ ದೂರವೇನೂ ಹೋಗಲಾರೆವು. ಆದುದರಿಂದ ಪೋಲೀಸರು ಕೂಡಲೆ ನಮ್ಮನ್ನು ಹಿಡಿಯುವರು.

ಬ್ಲೇಕ—ಇದಕ್ಕೆ ನೀನು ಚಿಂತಿಸುವುದು ಬೇಡ. ನನ್ನ ಬಲದ ಮೇಲೆ ನಿನ್ನನ್ನು ನಾನು ಕರೆದೊಯ್ಯುತ್ತಲಿರುವೆನು. ನಿನ್ನ ರಕ್ಷಣೋಪಾಯವನ್ನು ನಾನು ಮಾಡಿಟ್ಟಿರುವೆನು. ಹೊರಡು, ಇನ್ನು ತಡಮಾಡಬೇಡ.

ಪೋಲನು ಕೆಲ ನಿಮಿಷಗಳ ವರೆಗೆ ಜಡವತ್ ಕುಳಿತಿದ್ದನು. ತನ್ನ ಕರ್ತವ್ಯವನ್ನಾತನು ಸ್ಥಿರಮಾಡಲಾರದಾದನು. ಕೊನೆಗವನು:—ನನಗೆ ನಿಮ್ಮ ಮಾತಿನ ಮೇಲೆ ವಿಶ್ವಾಸವಾಗುತ್ತಿಲ್ಲ. ನಿಜವಾಗಿಯೂ ನನ್ನನ್ನು ಕರೆದುಕೊಂಡು ನೀವೀ ದೇಶವನ್ನು ಬಿಡಬಲ್ಲಿರಾ?

ಬ್ಲೇಕ—ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ಪೋಲ—ಆದರೆ ಇದರಿಂದ ನಿಮಗೆ ಲಾಭವೇನು? ನನಗಾಗಿ ನೀವು ಇಷ್ಟೇಕೆ ಕಷ್ಟವನ್ನು ವಹಿಸುತ್ತಿರುವಿರಿ? ಇದರಿಂದ ನಿಮ್ಮ ಮೇಲೆ ಘೋರ ಸಂಕಟವೊದಗುವ ಸಂಭವವಿದೆ. ನನ್ನ ನಿರ್ದೋಷಿತೆಯನ್ನು

ಪ್ರಮಾಣಿತಗೊಳಿಸಲಾಗದಿರುವುದರಿಂದ ಸೀವೀ ಮಾರ್ಗವನ್ನವಲಂಬಿಸಲು ನಿರ್ಧರಿಸಿರುವಿರೋ?

ಬ್ಲೇಕ—ಅಲ್ಲ. ನಾನು ನಿನ್ನ ನಿರ್ದೋಷಿತೆಯನ್ನು ಸಿದ್ಧಗೊಳಿಸಿಯೇ ತೀರುವೆನು. ಈಗ ನಿನ್ನನ್ನು ಇಂಗ್ಲಂಡಕ್ಕೊಯ್ಯಲು ವಿಶೇಷವಾದೊಂದು ಕಾರಣವಿದೆ. ನಿನ್ನ ಪತ್ನಿಯು ಅಕಸ್ಮಾತ್ತಾಗಿ ಕಠಿಣ ರೋಗಗ್ರಸ್ತಳಾಗಿರುವಳು. ನಿನ್ನನ್ನು ನೋಡಲಾರಳಾದರೆ ಅವಳುಳಿಯುವುದು ಕಠಿಣವೆಂದು ಡಾಕ್ಟರರು ಹೇಳಿರುವರು.

ಪೋಲ—ಮೆಡೆಲಿನಳು ರೋಗಗ್ರಸ್ತಳಾಗಿರುವಳೇ? ಎಂತಹ ರೋಗ? ಅಸಾಧ್ಯವಾದ ರೋಗವೇನೂ ಅಲ್ಲವಷ್ಟೆ?

ಬ್ಲೇಕ—ಅಸಾಧ್ಯವಾದುದಲ್ಲ; ಆದರೆ ನಾನು ಶೀಘ್ರವಾಗಿ ನಿನ್ನನ್ನು ಕರೆದುಕೊಂಡು ಹೋಗಲಾಗದೆ ಹೋದರೆ, ಏನಾಗುವುದೆಂದು ಹೇಳುವುದಸಾಧ್ಯ.

ಪೋಲ— ಹಾಗಾದರೆ ಏನು ಬೇಕಾದರೂ ಆಗಲಿ. ಅಗತ್ಯವಾಗಿ ನಾನು ನಿಮ್ಮ ಜೊತೆಗೆ ಬರುವೆನು. ತಡಮಾಡಬೇಡಿರಿ ಅರೆ ತಾಸಿನಲ್ಲಿ ನಾನು ದುರ್ಗವನ್ನು ಸೇರದಿದ್ದೊಡನೆ ನನ್ನನ್ನು ಅನ್ವೇಷಿಸತೊಡಗುವರು.

ಬ್ಲೇಕ—ನಡೆ ಹಾಗಾದರೆ.

ಆಗ ಸಂಧ್ಯಾಸಮಯದ ಕತ್ತಲೆಯು ದಟ್ಟವಾಗಹತ್ತಿತ್ತು. ಇಬ್ಬರೂ ಮಾಳಿಗೆಯ ಮೇಲೆ ಹೋಗಿ ನಿಂತರು. ಅಲ್ಲಿಗೆ ಪ್ರಾಕಾರದ ಮೇಲಿನ ಕಾವಲುಗಾರರಾರೂ ಕಾಣಿಸಲಿಲ್ಲ. ಬ್ಲೇಕನು ಹಗ್ಗವೊಂದನ್ನು ತೂಗಬಿಟ್ಟು ಆದರ ತುದಿಯನ್ನು ಕಿಟಕಿಯ ಕಂಬಿಗೆ ಬಿಗಿದು ಕಟ್ಟಿದನು. ಅದನ್ನು ಹಿಡಿದುಕೊಂಡು ಇಬ್ಬರೂ ಕೆಳಗಿಳಿದರು ಬಳಿಕ ಒಂದು ವೃಕ್ಷದ ಶಾಖೆಯನ್ನು ಹಿಡಿದುಕೊಂಡು ಇಬ್ಬರೂ ಗೋಡೆಯ ಬುಡಕ್ಕೆ ಬಂದರು.

ಬೇಗಬೇಗನೆ ಅರ್ಧ ಮೈಲು ದಾರಿಯನ್ನು ನಡೆದ ಮೇಲೆ ಒಂದು ಮೊಟರು ನಿಂತಿರುವುದು ಕಂಗೊಳಿಸಿತು. ಬ್ಲೇಕನು ಅದರ ದೀಪವನ್ನು ಹಚ್ಚಿದನು. ಬಳಿಕ ಒಂದು ಬ್ಯಾಗಿನಿಂದ ಜರ್ಮನ್ ಪೋಲೀಸರ ಒಂದು ಜೊತೆ ಸೀಲೀ ಯುನಿಫಾರ್ಮನ್ನೂ ಎರಡು ಟೋಪಿಗಳನ್ನೂ ಮತ್ತೆರಡು ಕರೀ ಬಣ್ಣದ ತೊಗಲಿನ ಪೆಟ್ಟಿಗೆಗಳನ್ನೂ ತೆಗೆದನು. ಆ ಬ್ಯಾಗಿನಲ್ಲಿ ಅಲ್ಲಿಯ ಪೋಲೀಸರ ಉಡುಪೆಲ್ಲ ಮಡುಗಿದ್ದಿತು.

ಪೋಲನಿಗೆ ಇದನ್ನೆಲ್ಲವನ್ನು ಕಂಡು ತುಂಬಾ ಕುತೂಹಲವಾಯಿತು. ಬ್ಲೇಕನಂದನು:— ಬೇಗ ಈ ಉಡಿಗೆಯನ್ನು ತೊಟ್ಟುಕೋ.

ಐದು ನಿಮಿಷಗಳೊಳಗೆ ಇಬ್ಬರೂ ಜರ್ಮನ್ ಪೋಲೀಸರ ಉಡಿಗೆಯಲ್ಲಿ ಸುಸಜ್ಜಿತರಾದರು. ಕಳಚಿದ ಬಟ್ಟೆಗಳನ್ನು ಬ್ಲೇಕನು ಬ್ಯಾಗಿನೊಳಗಿಟ್ಟನು. ತರುವಾಯ ಕೃತಕ ಗಡ್ಡ-ಮೀಸೆಗಳನ್ನಿಟ್ಟುಕೊಂಡು ಬಂಡಿಯನ್ನು ಬಿಟ್ಟನು.

ಅದೇ ವೇಳೆಗೆ ಸರಿಯಾಗಿ ಗ್ಲೇಜ ದುರ್ಗದಿಂದ ಪುನಃ ಪುನ: ಬಂದೂಕಿನ ಸದ್ದುಗಳಾಗತೊಡಗಿದುವು. ಆಗ ಪೋಲನು:— ಈ ಸದ್ದಿನ ಆಶಯವನ್ನು ನೀವು ತಿಳಿದಿರಲ್ಲವೆ?

ಬ್ಲೇಕ— ನಿನ್ನ ಶೋಧ ನಡೆಯುತ್ತಿದೆ; ಗಾಬರಿಯಾಗಬೇಡ. ಇನ್ನು ನಮ್ಮನ್ನು ಯಾರೂ ಹಿಡಿಯಲಾರರು.

ಗ್ಲೇಜದ ಅಧಿಕಾರಿಗಳು ಪೋಲನ ಪಲಾಯನದ ಸಮಾಚಾರವನ್ನು ತಂತಿಮೂಲಕ ನಾಲ್ಕೂ ಕಡೆಗೆ ಕಳುಹಿಸಿದರು; ಆದರೆ ಆ ನಟ್ಟಿರುಳಿನಲ್ಲಿ ಪೋಲೀಸರಿಗೆ ಓಡುವವರ ಸುಳಿವೇನೂ ಸಿಗಲಿಲ್ಲ.

ಮರು ದಿನ ಬೆಳಗ್ಗೆ ಒಂದೂರಿನ ತಿರುಪನ್ನು ತಿರುಗುತ್ತಲೆ ರಸ್ತೆಯಲ್ಲಿ ಆರು ಜನ ಅಶ್ವಾರೋಹೀ ಸೈನಿಕರು ನಿಂತಿರುವುದನ್ನು ಬ್ಲೇಕನು ಕಂಡನು. ಮೋಟರಿನ ಸ್ವರ ಕೇಳುತ್ತಲೆ ಅವರೆಲ್ಲರೂ ಬಂಡಿಯ ಸಮೀಪಕ್ಕೆ ಬಂದರು.

ಬ್ಲೇಕನು ಬಂಡಿಯನ್ನು ನಿಲ್ಲಿಸಿ ಆ ಸೈನಿಕರನ್ನು ಕೇಳಿದನು:— ಓಡಿಹೋದವನದೇನಾದರೂ ಕುರುಹು ಸಿಕ್ಕಿತೇನು?

ಸೈನಿಕ— ಇಲ್ಲ; ಇನಸ್ಪೆಕ್ಟರ ಸಾಹೇಬ, ನಮಗಿಷ್ಟರೊಳಗೇನೂ ಕುರುಹು ಸಿಕ್ಕಿಲ್ಲ. ಅವನು ಯಾವ ದಾರಿಯಿಂದ ಓಡಿಹೋಗಿರುವನೆಂಬುದು ನಿಮಗೇನಾದರೂ ಗೊತ್ತಾಗಿದೆಯೋ?

ಬ್ಲೇಕ— ಇಲ್ಲ. ನಾಲ್ಕೂ ಕಡೆಗೆ ಜನರು ಹೋಗಿರುವರು. ಆ ನಿರ್ಭಾಗ್ಯನು ಎತ್ತಲೂ ಓಡಿ ಹೋಗಲಾರನು. ಆತನು ಹಿಡಿಯಲ್ಪಡುವುದೇನೋ ನಿಶ್ಚಯ. ಮೂವರು ಆಂಗ್ಲ ಸ್ನೇಹಿತರು ಆತನನ್ನು ಮೋಟರಿನಲ್ಲಿ ಕುಳ್ಳಿರಿಸಿಕೊಂಡು ಫರಾರಿಯಾಗಿರುವರಂತೆ.

ಕುದುರೆ ಸವಾರರು ಬ್ಲೇಕನಿಗೆ ಸೈನಿಕ ಪದ್ಧತಿಯಿಂದ ನಮಸ್ಕರಿಸಿ ದಾರಿ ಬಿಟ್ಟು ನಿಂತರು. ವಿಪತ್ತು ತೊಲಗಿತು. ಬ್ಲೇಕನು ಮೋಟರನ್ನು

ಮುಂದಕ್ಕೆ ಬಿಟ್ಟನು. ದಾರಿಯೊಳಗೆ ಬೇರೆ ಹಲವೆಡೆಗಳಲ್ಲಿ ಬ್ಲೇಕನಿಗೆ ಶಿಪಾಯಿಗಳ ದರ್ಶನವಾಯಿತು; ಆದರೆ ಯಾರಿಗೂ ಸಂಶಯು ಬರಲಿಲ್ಲ. ಈ ರೀತಿ ಇಪ್ಪತ್ತು ಮೈಲು ದಾರಿಯನ್ನು ದಾಟಿ ಬ್ಲೇಕನು ಬ್ರಿಮೆನ್ ಬಂದರ ವನ್ನು ಮುಟ್ಟಿದನು. ಅಲ್ಲಿ ಲಂಡನದ 'ಲಂಡನ್ ಆ್ಯಂಡ್ ಬ್ರಿಮೆನ್ ನೆವಿಗೇಶನ್ ಕಂಪನಿ'ಯ 'ವೈಕಿಂಗ್' ಎಂಬ ಹೆಸರಿನ ಹಡಗು ಬ್ರಿಟಿಶ ಬಾವುಟ ವನ್ನು ಹಾರಿಸುತ್ತ ಬ್ಲೇಕನ ಪ್ರತೀಕ್ಷೆಯಲ್ಲಿ ನಿಂತಿದ್ದಿತು. ಬ್ಲೇಕನು ಫೋಲ ನೊಡನೆ ಅರ್ಧ ಗಂಟೆಯೊಳಗೆ ಹಡಗವನ್ನೇರಿದನು. ಹಡಗು ಆ ಕ್ಷಣವೇ ಬಂದರವನ್ನು ಬಿಟ್ಟು ವೇಗದಿಂದ ಇಂಗ್ಲಂಡಿನತ್ತ ಹೊರಟಿತು.



ಯಥಾಸಮಯಕ್ಕೆ ಆ ಹಡಗು ಟೇಮ್ಸ ನದಿಯನ್ನು ತಲುಪಿ, ಲಂಡನಿನ 'ಟೇಯರ್ ಬ್ರಿಜ್' ಎಂಬ ಸ್ಥಳದ ಸಮೀಪ ದೇಕಿಗೆ ಹೋಗಿ ನಿಂತಿತು. ಫೋಲನು ಬಂಡಿಯೊಂದನ್ನು ಮಾಡಿಕೊಂಡು ಮನೆಯ ಕಡೆಗೆ ನಡೆದನು. ಹೆಂಡತಿಯೊಂದಿಗೆ ಪುನರ್ಮಿಲನವಾಯಿತು. ಮೆಡೆಲಿನಳು ಇತ್ತ ಕೆಲ ದಿನಗಳಿಂದೀಚೆಗೆ ಬಹಳ ಆರೋಗ್ಯಗಳಿಸಿದ್ದಳು.



ಬ್ಲೇಕನು ಮನೆಗೆ ಬಂದು ಅಕಸ್ಮಾತ್ತಾಗಿ ಸ್ಮಿತ್ರನೆಲ್ಲಿಯೋ ಕಣ್ಮರೆಯಾಗಿರುವನೆಂದು ಕೇಳಿದನು. ಇದನ್ನು ಕೇಳಿದ ಬ್ಲೇಕನು ತುಂಬಾ ಚಿಂತಿತನಾದನು.

## ಬ್ಲೇಕನ ದಸ್ತಗಿರಿ

ಆವ ದಿನ ಬ್ಲೇಕನು ಜರ್ಮನಿಯಿಂದ ಹಿಂದಿರುಗಿ ಬಂದನೋ, ಅದೇ ದಿನ ರಾತ್ರಿ ಎಂಟು ತಾಸಿಗೆ ಲಂಡನದ ಗ್ರೋವ್ ಸ್ಟ್ರೀಟನ ಸಾಮಾನ್ಯ ಹೊಟೆಲ್‌ವೊಂದರಲ್ಲಿ ಛದ್ಮವೇಷೀ ರಶ್ಯನ್ ಬೇಹುಗಾರರಾದ ಅಲೆಕ್ಸಿಸನೂ ಸಾರ್ಜಿಯೂ ಎದುರುಬದುರಾಗಿ ಕುಳಿತು ಮೆಲ್ಲ ಮೆಲ್ಲನೆ ಮಾತಾಡುತ್ತಿದ್ದರು. ಇದವರ ಮಲಗುವ ಕೋಣೆಯಾಗಿದ್ದಿತು. ಕೋಣೆಯಲ್ಲಿ ಒಂದೆಡೆ ಎರಡು ಮಂಚಗಳಿದ್ದು, ನಡುವೆ ಮೇಜಿದ್ದಿತು.

ಅಲೆಕ್ಸಿಸ— ಈ ಸಲ ನಾವು ದೊಡ್ಡ ಲಾಭವನ್ನು ಹೊಡೆದವು.

ಸಾರ್ಜೆ—ಅದರಲ್ಲೇನು ಸಂದೇಹ? ಆದರೆ ನಮ್ಮ ಪರಿಶ್ರಮ ಮತ್ತು ಅಪಾಯಕ್ಕೆ ಇಷ್ಟು ರೂಪಾಯಿಗಳೂ ಸಾಲವೆಂದು ಹೇಳಬೇಕು. ಮೋಗಡೀ ವರ್ಗದಲ್ಲಿ ನಾವು ಅಲ್ಪ ಕಷ್ಟಪಡಬೇಕಾಗಿದ್ದಿತೇ? ಮತ್ತಲ್ಲಿಂದ ಕಾಲ್ತೆಗೆದು ಲಂಡನ್ನಿಗೆ ಬರುವಾಗಂತೂ ಜೀವ ಕೈಯಲ್ಲಿಟ್ಟುಕೊಂಡೇ ಬರಬೇಕಾಯಿತು.

ಅಲೆಕ್ಸಿಸ—ಯಾವುದರ ಕೊನೆಯು ಒಳಿತೋ, ಅದರದೆಲ್ಲವೂ ಒಳ್ಳೆಯದೇ. ಕೌಂಟನಂತಹ ಚತುರ ಮನುಷ್ಯನು ನಮ್ಮ ಮಾತಿಗೆ ಒಡನೆ ಒಡಂಬಟ್ಟನೆಂಬುದು ತುಂಬಾ ಆಶ್ಚರ್ಯದ ಮಾತು. ಅತನೊಂದು ವೇಳೆ ನಿಯಮದಂತೆ ನಡೆದಿದ್ದರೆ, ಬಹಳ ಕಡಿಮೆ ಹಣದಲ್ಲಿ ನಾವು ಒಪ್ಪಬೇಕಾಗುತ್ತಿದ್ದಿತು.

ಸಾರ್ಜೆ— ನಕ್ಷೆಯು ಎಷ್ಟು ಬೆಲೆಯುಳ್ಳದ್ದೆಂಬುದನ್ನು ಅವನು ಚೆನ್ನಾಗಿ ಬಲ್ಲನು; ಆದರೆ ಅವನಿಗಾಗಿ ನಾವು ಮಾಡಿರುವಂತಹ ಕೆಲಸವನ್ನು ಎಷ್ಟು ಮಂದಿ ಮಾಡಬಲ್ಲರು? ನಮ್ಮನ್ನು ಕೈಯೊಳಗಿಟ್ಟುಕೊಳ್ಳುವುದರಿಂದ ಭವಿಷ್ಯದಲ್ಲವನಿಗೆ ಲಾಭದ ವಿನಃ ಹಾನಿಯಿಲ್ಲ. ಹತ್ತು ರೂಪಾಯಿಗಳ ಹೆಚ್ಚು ಕಡಿಮೆಯಲ್ಲಿ ಏನಿದೆ? ಇಲ್ಲಿಗೆ ಬಂದಾಗ ಅವನೆಷ್ಟು ಮೂಗು ಮುರಿದಿದ್ದ?

ಅಲೆಕ್ಸಿಸ—ಹೌದು. ಇಲ್ಲಿಗೆ ಬರಲವನಿಗೆ ಸ್ವಲ್ಪವೂ ಇಚ್ಛೆಯಿರಲಿಲ್ಲ. ಈ ಸ್ಥಳವೂ ಒಳ್ಳೇ ಮನುಷ್ಯರಿಗಿರಲು ಯೋಗ್ಯವಲ್ಲ. ಆದುದರಿಂದ ಅವನ ಮೇಲೆ ದೋಷಹೊರಿಸಲಾಗುವುದಿಲ್ಲ.

ಸಾರ್ಜೆ—ಈಗಂತೂ ಕೆಲಸ ತೀರಿಯಾಯಿತು. ಇನ್ನಿಲ್ಲಿರುವುದರಿಂದೇನು ಲಾಭ? ನಾನಿನ್ನೀ ನಗರದಲ್ಲಿರಲೆಳಸುವುದಿಲ್ಲ.

ಅಲೆ—ಸರಿ. ಒಂದೆರಡು ದಿನಗಳಲ್ಲಿ ಪ್ಯಾರೀಸಕ್ಕೆ ಹೋಗುವಾ.

ಸಾರ್ಜೆ— ಅಲ್ಲಿಂದ ಆಸ್ಟ್ರಿಯಾಕ್ಕೆ ಹೋಗಬೇಕು. ಅಲ್ಲಿಯೂ ತುಂಬಾ ಕೈಹತ್ತೀತು. ವಿಸ್ತುಲಾ ನದಿಯ ತೀರದಲ್ಲಿ ಹೊಸದಾಗಿ ತಯಾರಾದ ದುರ್ಗದ ನಕ್ಷೆಯನ್ನು ತರಲಿಕ್ಕೆ ಒಂದು ದಿನ ಕೌಂಟನು ನನ್ನ ಹತ್ತಿರ ಹೇಳಿದ್ದನು. ಈಗೊಂದು ಸಲ ನಾನು ನೋಟುಗಳನ್ನೆಣಿಸಿ ನೋಡುವೆನು; ಆಗಂತೂ ಅವಸರದಲ್ಲಿ ಎಣಿಸಲಾಗಲಿಲ್ಲ. ಹೀಗೆಂದು ಸಾರ್ಜೆಯು ನೋಟಿನ ಕಟ್ಟುಗಳನ್ನು ತೆಗೆದು ಅವುಗಳನ್ನು ಒಂದೊಂದಾಗಿ ಲೆಕ್ಕಮಾಡಿ, ತಿರುಗಿ ಅವನ್ನು ಪೂರ್ವವತ್ ಜೇಬಿನೊಳಗಿಟ್ಟುಕೊಂಡನು.

ಶರಾಬು ಕುಡಿಯುತ್ತ ಸಾರ್ಜೆಯು ಹೇಳಿದನು:—ಮೋಗಡೀವರ್ಗ ದುರ್ಗದ ನಕ್ಷೆಯನ್ನು ಕೊಟ್ಟ ಅಲ್ಲಿಯ ಅಧಿಕಾರಿಯ ಅಭಿಪ್ರಾಯವು ನನಗೆ ಕೊಂಚವೂ ತಿಳಿಯಲಿಲ್ಲ.

ಅಲೆಕ್ಸಿಸ—ನಾನದನ್ನರಿತುಬಿಟ್ಟಿದ್ದೆ. ಅವನು ತನ್ನ ಹಗೆಯೊಬ್ಬ ನನ್ನು ಸಿಕ್ಕಿಹಾಕಿಸುವುದಕ್ಕಾಗಿ ಈ ಕೆಲಸ ಮಾಡಿರುವನು; ಆದರೆ ನಾವು ಎಚ್ಚರದಪ್ಪಿಸಿದ ಮನುಷ್ಯನಿಗೆ ಏನಾಯಿತೆಂಬುದು ಗೊತ್ತಿಲ್ಲ.

ಸಾರ್ಜೆ—ನಮ್ಮ ಕೈಯಲ್ಲಿ ನಕ್ಷೆ ಮಾರಿದ್ದ ಮನುಷ್ಯನ ಸರಿಯಾದ ಪರಿಚಯ ನಮಗೆ ಸಿಕ್ಕಿದ್ದರೆ ಏನಾದರೂ ಗೊತ್ತಾಗುತ್ತಿದ್ದಿತು. ಆ ಮನುಷ್ಯ ನನ್ನು ನೋಡಸಿಕ್ಕಿದರೂ ನಾವಾತನ ಗುರತು ಹಿಡಿಯಲಾರೆವು; ಏಕೆಂದರೆ ಅವನಾವಾಗಲೂ ನಮ್ಮೆಡೆಗೆ ಕೃತ್ರಿಮ ವೇಷದಲ್ಲಿಯೇ ಬರುತ್ತಿದ್ದನು. ಒಮ್ಮೆ ಆತನು ತನ್ನ ಸಿಗರೇಟ ಬಾಕ್ಸನ್ನು ತೆಗೆದಿದ್ದಾಗ, ಅದರ ಮೇಲೆ ಅವನ ಹೆಸರಿನ ಮೋನೋಗ್ರಾಮವಿದ್ದದ್ದು ನೋಡಿದ್ದೆನು. ಅದರಲ್ಲಿ 'ಓ ಎಚ್' ಎಂಬೆರಡು ಅಕ್ಷರಗಳು ಕೆತ್ತಿದ್ದುವು.

ಅಲೆಕ್ಸಿಸ—ಹೌದು. ಅದನ್ನು ನಾನೂ ಕಂಡಿದ್ದೆನು; ಆದರೆ ಮೋಗಡೀವರ್ಗ ದುರ್ಗದೊಳಗೆ ಹಲವಾರು ಉದ್ಯೋಗಸ್ಥರಿರುವರಾದುದರಿಂದ, ಆ ಎರಡಕ್ಷರಗಳಿಂದ ಬೇರೆ ಮನುಷ್ಯರ ಹೆಸರೂ ಬೋಧವಾಗಬಹುದು. ವಿಶೇಷವಾಗಿ............

ಅಕಸ್ಮಾತ್ ಅಲೆಕ್ಸಿಸನು ಹಿಂದಿರುಗಿ ನೋಡಿದನು. ಕೋಣೆಯೊಳಗೆ ಯಾರೋ ಅವಿತುಕೊಂಡಿರುವರೆಂಬಂತೆ ಅವನಿಗೆ ಭಾಸವಾಯಿತು. ಇಬ್ಬರೂ ಭಯಭೀತರಾಗಿ ಒಬ್ಬರನ್ನೊಬ್ಬರ ಮುಖ ನೋಡತೊಡಗಿದರು. ಬಳಿಕ ತ್ವರೆಯಿಂದಿಬ್ಬರೂ ಎದ್ದು ಕೋಣೆಯೊಳಗೆ ಹುಡುಕಹತ್ತಿದರು. ಥಕ್ಕನೆ ಮಂಚದಡಿ ದೃಷ್ಟಿಹೋಯಿತು. ಹಾಸುಗೆಯನ್ನೆತ್ತುತ್ತಲೆ ಬ್ಲೇಕನ ಶಿಷ್ಯ ಸ್ಮಿತ್ರನ ತಲೆ ಗೋಚರಿಸಿತು.

ಸ್ಮಿತ್ರನು ಅಲ್ಲಿಂದ ಕಾಲ್ಕೀಳಲೆಳಸಿದ; ಆದರೆ ಬಾಗಿಲು ಇಕ್ಕಿತ್ತು. ಆತನು ಬಾಗಿಲಿಗೆ ಆತು ನಿಂತುಕೊಂಡು, ಪಿಸ್ತೂಲನ್ನು ತೆಗೆಯಲು ಜೇಬಿಗೆ ಕೈ ಹಾಕಿದನು; ಆದರೆ ಈ ಗಲಿಬಿಲಿಯಲ್ಲಿ ಅವನ ಪಿಸ್ತೂಲು ಕೆಳಕ್ಕೆ ಬಿದ್ದು ಹೋಯಿತು. ಅದನ್ನೆತ್ತಿಕೊಳ್ಳಬೇಕೆನ್ನುವಷ್ಟರಲ್ಲಿ ಸಾರ್ಜೆಯು ಅದನ್ನು

ಹಸ್ತಗತ ಮಾಡಿಕೊಂಡನು. ಅಲೆಕ್ಸಿಸನೂ ತೀಕ್ಷ್ಣಧಾರೆಯ ಚೂರಿಯೊಂದನ್ನು ತೆಗೆದುಕೊಂಡು ಸ್ಮಿತ್ತನ ಮೇಲೆ ಬಿದ್ದನು. ಅಷ್ಟರೊಳಗೆ ಸ್ಮಿತ್ತನು ಒಂದು ಕುರ್ಚಿಯನ್ನೆತ್ತಿಕೊಂಡು ಅಲೆಕ್ಸಿಸನನ್ನುದ್ದೇಶಿಸಿ:— ತುಸು ಮುಂದೆ ಬಂದೆಯೆಂದರೆ ಈ ಕುರ್ಚಿಯು ಆಘಾತದಿಂದ ನಿನ್ನ ತಲೆಯನ್ನೊಡೆದು ಬಿಡುವೆನು. ಕಳ್ಳರೆ!

ಅಲೆಕ್ಸಿಸನು ದೂರಕ್ಕೆ ಸರಿದು, ಭಯದಿಂದ ಕಂಪಿಸತೊಡಗಿದನು.

ಸಾರ್ಜ ನುಡಿದನು:—ಗುಂಡಿನ ಸದ್ದನ್ನು ಕೇಳಿದರೆ ಹಲವರು ಇಲ್ಲಿಗೆ ಬರುವರಾದುದರಿಂದ ನಾನು ಗುಂಡು ಹಾರಿಸುವುದಿಲ್ಲ. ಹಾಗೆ ಮಾಡಿದರೆ ನಾವು ಸಂಕಟಕ್ಕೆ ಸಿಲುಕಬೇಕಾಗುವುದು. ಅಲೆಕ್ಸಿಸ, ನೀನು ಯಾವ ಬಗೆಯಿಂದಲಾದರೂ ಅವನ ಹತ್ತಿರ ಹೋಗಿ ನಿನ್ನ ಚೂರಿಯಿಂದ ಅವನ ಎದೆಯನ್ನು ಚುಚ್ಚು.

ಸ್ಮಿತ್ತ:-ಜೋಕೆ! ಅಲ್ಲಿಯೇ ನಿಲ್ಲು; ಇಲ್ಲವಾದರೆ ನಾನು ಕೂಗಿಬಿಡುವೆ.

ಅಲೆ—ಬೇಡ. ಕ್ರಿಮಿನಲ್ಲಿಗೆ ಸಿಲುಕುವುದರಿಂದ ಏನೂ ಲಾಭವಿಲ್ಲ.

ಸಾರ್ಜ—ಇವನನ್ನು ಕೊಲ್ಲದಿರುವುದರಿಂದಲೂ ನಮಗೆ ಕ್ಷೇಮವಿಲ್ಲ. ಈ ಪೋರನು ಖಂಡಿತವಾಗಿ ಜರ್ಮನ್ ರಾಜದೂತನ ಗುಪ್ತಚರನಿರಬೇಕು. ಗುಪ್ತರೀತಿಯಿಂದ ನಮ್ಮನ್ನು ಪತ್ತೆಹಚ್ಚುವುದಕ್ಕಾಗಿ ಬಂದಿದ್ದಾನೆ. ಕೌಂಟನೊಂದಿಗೆ ನಾವಾಡಿದ ಮಾತುಗಳನ್ನೂ ಇವನು ಕೇಳಿರುವನು. ಇವನನ್ನು ಬಿಡುವುದರಿಂದ ನಾವು ಭಾರೀ ವಿಪತ್ತನ್ನು ಎದುರಿಸಬೇಕಾಗುವುದು.

ಅಲೆಕ್ಸಿಸ—ಇವನನ್ನು ಹಿಡಿದು ಇಲ್ಲಿಯೇ ಕಟ್ಟಿಹಾಕು. ನಾನು ಕೌಂಟನ ಬಳಿಗೆ ವರ್ತಮಾನ ಕಳಿಸುವೆನು. ಅವನು ಬಂದರೆ ಬಹುಶಃ ಇವನನ್ನು ಗುರತಿಸಬಹುದು.

ಸ್ಮಿತ್ತ—ನನ್ನನ್ನು ನೀವು ಹಿಡಿಯಲೆತ್ನಿಸಿದುದೇ ಆದರೆ, ನಾನೀಗಲೆ ಗಲಾಟೆ ಹೊಡೆದು ನೂರಾರು ಜನರನ್ನಿಲ್ಲಿ ಕೂಡಿಸಿಬಿಡುವೆನು. ಕುಶಲ ಬೇಕೆಂದಿದ್ದರೆ, ನನ್ನನ್ನು ಬಿಟ್ಟುಬಿಡಿರಿ.

ಅವರಿಬ್ಬರೂ ಸೇರಿ ಸ್ಮಿತ್ತನ ಮೇಲೆ ಆಕ್ರಮಣ ಮಾಡಬೇಕೆಂದಿರುವಷ್ಟರಲ್ಲಿ ಹೊರಗಿನಿಂದಾರೋ ಬಾಗಿಲನ್ನು ಬಡೆದು ನೂಕಿದರು. ಬಾಗಿಲಿಗೆ ಅಗಳಿ ಹಾಕಿರಲಿಲ್ಲವಾದುದರಿಂದ, ನೂಕಿದೊಡನೆ ಅದು ತೆರೆದು

ಬಿಟ್ಟಿತು. ತಟ್ಟನೆ ಇಬ್ಬರು ಒಳಗೆ ಕಾಲಿಟ್ಟರು. ಅವರೊಳಗೊಬ್ಬನು ಬ್ಲೇಕನಾಗಿದ್ದನು; ಇನ್ನೊಬ್ಬನು ಇನಸ್ಪೆಕ್ಟರ ವಿಜನ.

ಬ್ಲೇಕನನ್ನು ನೋಡಿ ಸ್ಮಿತ್ತನು ಉತ್ಸಾಹಿತನಾಗಿ ಹೇಳಿದ:—ನೀವು ಸರಿಯಾದ ಸಮಯಕ್ಕೆ ಬಂದಿರಿ. ನಿಮಗೆ ನನ್ನ ಸುಳಿವು ಸಿಕ್ಕಿದುದು ಹೇಗೆ?

ಈ ಹೊಸ ಆಪತ್ತಿನಿಂದ ಸಾರ್ಜಿಯೂ ಅಲೆಕ್ಸಿಸನೂ ಕ್ಷಣ ಹೊತ್ತು ಕಿಂಕರ್ತವ್ಯಮೂಢರಾಗಿ ಹೋದರು. ಬಳಿಕ ಇಬ್ಬರೂ ಪಿಸ್ತೂಲನ್ನೂ ಚೂರಿಯನ್ನೂ ಹಿರಿದು ಆಗಂತುಕರಿಬ್ಬರ ಮೇಲೆ ದಾಳಿಮಾಡಲುದ್ಯುಕ್ತರಾದರು; ಆದರೆ ಅವರು ಆಕ್ರಮಿಸುವುದರೊಳಗಾಗಿ ಬ್ಲೇಕನ ಭೀಷಣಾಕಾರದ 'ಟೈಗರ' ನಾಯಿಯು ಅಲೆಕ್ಸಿಸನ ಮೇಲೆ ಹಾರಿ ಅವನನ್ನು ನೆಲಕ್ಕೆ ಕೆಡವಿಬಿಟ್ಟಿತು! ಇದೇ ಸಂದರ್ಭವನ್ನು ಸಾಧಿಸಿ, ಸ್ಮಿತ್ತನೂ ಇನಸ್ಪೆಕ್ಟರ ವಿಜನನೂ ಸಾರ್ಜಿಯನ್ನು ಹಿಡಿದು ಕಟ್ಟಿಹಾಕಿದರು. ಈ ಕೆಲಸವು ಹೊಟೆಲಿನಲ್ಲಿರುವವರಾರಿಗೂ ಗೊತ್ತಾಗದಷ್ಟು ಸದ್ದಿಲ್ಲದೆ ಆಗಿಹೋಯಿತು. ಟೈಗರವು ಅಲೆಕ್ಸಿಸನ ಎದೆಯಮೇಲೇರಿ ಜೋರಿನಿಂದ ಗುರ್ರೆನ್ನಹತ್ತಿತು. ಅದರ ಭಯಂಕರ ಮುಖವನ್ನು ನೋಡಿ ಅಲೆಕ್ಸಿಸನ ಪ್ರಾಣವೇ ಹೋದಂತಾಯಿತು. ಸುಲಭವಾಗಿ ಆತನು ತನ್ನನ್ನು ಬ್ಲೇಕನ ಕೈಯಲೊಪ್ಪಿಸಿದನು. ಈ ಪ್ರಕಾರ ಇಬ್ಬರೂ ಬಂಧಿಸಲ್ಪಟ್ಟರು.

ಸ್ಮಿತ್ತನು ಹೇಳಿದನು:— ನಿಮ್ಮನ್ನಿಲ್ಲಿ ನೋಡಿ ನಾನು ಕೌತುಕಗೊಂಡಿರುವೆನು. ನೀವಿಷ್ಟು ಬೇಗ ಇಂಗ್ಲಂಡಕ್ಕೆ ಹಿಂದಿರುಗುವಿರೆಂದ ನಾನೆಣಿಸಿರಲಿಲ್ಲ.

ಬ್ಲೇಕ—ನಾನು ಇವತ್ತೇ ಸಂಜೆಗೆ ಮನೆಗೆ ಬಂದೆನು.

ಸ್ಮಿತ್ತ—ಹೋದ ಕೆಲಸ ನೆರವೇರಿತೇ?

ಬ್ಲೇಕ—ಹೌದು.

ಸ್ಮಿತ್ತ—ಇಲ್ಲಿ ನನ್ನಿಂದಾಗಬಹುದಾದಷ್ಟನ್ನು ನಾನು ಮಾಡಿವೆನು. ಇನ್ನು ನಿಮ್ಮ ಕೆಲಸ ಕೊನೆಗಾಣಲಿಕ್ಕೆ ಹೆಚ್ಚಿಗೆ ಸಮಯವಿಲ್ಲವೆಂ ನಾನು ಊಹಿಸುತ್ತೇನೆ. ನೀವು ಯಾವ ರಷಿಯನ್ ಬೇಹುಗಾರರನ್ನ ಹಣೆಯಲ್ಲಿದ್ದಿರೋ ಅವರೇ ಇವರು. ಇಂದು ಸಾಯಂಕಾಲ ಈ ಮ ಬಂದು ನಾನು ಈ ಮಂಚದಡಿ ಅಡಗಿಕೊಂಡಿದ್ದೆನು. ಸ್ವಲ್ಪ ಹೊತಾ

ಮೇಲೆ ಇಲ್ಲಿಗೊಬ್ಬ ಮನುಷ್ಯನು ಬಂದನು. ಇವರು ಅವನಿಗೇ ಮೇಗಡೀ ವರ್ಗದ ನಕ್ಷೆಯನ್ನು ಮಾರಿರುವರು. ಇವರಿಬ್ಬರ ಗುಪ್ತ ಮಾತುಗಳನ್ನಾಲಿಸಲಾಗಿ ನಿಮ್ಮ ಅನುಮಾನವು ಸರಿಯೆಂದು ನನಗನಿಸಿತು. ಯಾವ ಫ್ರೇಚನು ಇವರ ಕೈಗೆ ಮೇಗಡೀವರ್ಗ ದುರ್ಗದ ನಕ್ಷೆ ಮಾರಿದ್ದನೋ, ಆತನು ಆ ದುರ್ಗದ ಓರ್ವ ಅಧಿಕಾರಿಯಂತೆ. ಅವನ ಜೇಬಿನ ಸಿಗರೇಟಿನ ಬಾಕ್ಸಿನ ಮೇಲೆ 'ಓ. ಎಚ್.' ಎಂದು ಬರೆದಿದೆಯಂತೆ.

ಬ್ಲೇಕ—ಬಹಳ ಕೆಲಸ ಮಾಡಿರುವೆ ನೀನು. ನಿನ್ನ ಕೆಲಸದಿಂದ ನನಗಾನಂದವಾಯಿತು. ನಾನೀ ಸಮಯದಲ್ಲಿ ಇಲ್ಲಿಗೆ ಬರದಿರುತ್ತಿದ್ದರೆ ನೀನು ಭಯಂಕರ ಕಷ್ಟವನ್ನೆದುರಿಸಬೇಕಾಗುತ್ತಿದ್ದಿತು.

ಸ್ಮಿತ್—ಫಕ್ಕನೆ ಈ ಮಂಚದ ಶಬ್ದವಾಯಿತು. ಇದರಿಂದಲೇ ಇವರಿಗೆ ಗೊತ್ತಾಯಿತು.

ಬ್ಲೇಕ—ನೀನು ಇಲ್ಲಿಗೆ ಬಂದುದು ಹೇಗೆ?

ಸ್ಮಿತ್—ನಿಮ್ಮ ಆಜ್ಞೆಯ ಮೇರೆಗೆ ನಾನು ಸರ ಹೆನ್ರಿ ಟೆಂಪರ್ಲಿಯನ್ನು ನೋಡಲು ಹೋಗಿದ್ದೆ. ಮೊನ್ನೆಯ ವರೆಗೆ ಅವರಿಂದ ನನಗೆ ಸಹಾಯ ಸಿಕ್ಕಲಿಲ್ಲ. ಆ ಮೇಲೆ ಅವರು ನನ್ನನ್ನು ಕರೆದು:—ರಷಿಯಾದ ಸೈನಿಕ ಬೇಹುಗಾರಿಕೆ ವಿಭಾಗದ ಒಬ್ಬ ಪ್ರಧಾನ ಉದ್ಯೋಗಸ್ಥನಾದ ಕೌಂಟ ಅರ್ಲಫನೆಂಬುವನು ಲಂಡನಕ್ಕೆ ಬಂದು 'ಸಿಸಿಲಿ' ಹೋಟೆಲಿನಲ್ಲಿ ನೆಲೆಸಿರುವನು. ಲಂಡನ್ನಿನಲ್ಲಿ ಕೆಲ ಒಡವೆಗಳನ್ನು ಕೊಳ್ಳುವ ನೆವದಿಂದ ವನು ಬಂದಿರುವನು, ಎಂದು ಹೇಳಿದರು. ಈ ಸುದ್ದಿ ಕೇಳಿ, ನಾನು ಸಿಸಿಲಿ ಹೋಟೆಲ್ಲಿಗೆ ಹೋಗಿ ಕೌಂಟನನ್ನೊಮ್ಮೆ ನೋಡಿ ಬಂದೆ. ನಿನ್ನೆ ಇಡೀ ಹಗಲು ಅವನ ಬೆನ್ನು ಹತ್ತಿದೆನು. ಸಂಜೆಗಾತನು ಅಡ್ಡಾಡಿಕೊಂಡು ಹೋಗಲಿಕ್ಕೆ ಬಂದಾಗ, ಅಲ್ಲಿಯ ಕಿರಾಣಿ ಅಂಗಡಿಯವನೊಬ್ಬನು ಅವನಿಗೊಂದು ಪತ್ರವನ್ನು ಕೊಟ್ಟನು. ಕೌಂಟನು ಆ ಪತ್ರವನ್ನು ಓದಿ, ಹರಿದು ಬೆಂಕಿಗೆ ಹಾಕಿದನು. ಇದನ್ನೆಲ್ಲ ನಾನು ಕಿಟಕಿಯ ಮೂಲಕ ನೋಡುತ್ತಲಿದ್ದೆ. ಕೆಲ ಹೊತ್ತಿನ ಮೇಲಾತನು ಕೋಣೆಯಿಂದ ಹೊರಬಿದ್ದನು. ಸಂದರ್ಭ ಸಾಧಿಸಿ ನಾನವನ ಕೋಣೆಯೊಳಗೆ ಹೋದೆನು. ನೋಡಲಾಗಿ, ಅಲ್ಲಿ ಕೆಲ ಕಾಗದದ ಚೂರುಗಳು ಹಾರಿಹೋಗಿ, ಸುಡದೆ ಹಾಗೆಯೇ

ಉಳಿದಿದ್ದವು. ಆ ತುಂಡುಗಳನ್ನು ಕೂಡಿಸಿ ನೋಡಿದೆ. ಯಾರೋ ಆತನನ್ನು ನಂಬರ ೭೭ನೇ ಗ್ರೋವಸ್ಟ್ರೀಟಕ್ಕೆ ರಾತ್ರಿ ಎಂಟು ತಾಸಿಗೆ ಬರಹೇಳಿದ್ದರು. ಒಡನೆ ನಾನಿಲ್ಲಿಗೆ ಬಂದೆ. ಒಬ್ಬ ಮುದುಕಿಯನ್ನು ಕೇಳಲಾಗಿ ಇಬ್ಬರು ವಿದೇಶೀ ಪುರುಷರು ಇಲ್ಲಿ ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡಿರುವರೆಂದು ತಿಳಿದು ಬಂದಿತು. ಅವರಿಬ್ಬರೂ ಊಟಮಾಡಿ ಹೋಗಿರುವರೆಂದು ಕೇಳಿದೆ. ನಾನು ಮುದುಕಿಗೆ ಸ್ವಲ್ಪ ಹಣಕೊಟ್ಟು ಈ ಕೋಣೆಯೊಳಗೆ ಬಂದೆ. ಆ ಮೇಲೆ ಇವರಿಬ್ಬರೂ ಬಂದರು. ಅನಂತರವೇ ಕೌಂಟ ಅರ್ಲಫನು ಇವರ ಭೇಟಿಗೆ ಬಂದನು. ಆತನಿವರಿಗೆ ಹಲವು ನೋಟುಗಳನ್ನಿತ್ತು ಇವರಿಂದ ರೂಪಾಯಿಗಳ ರಶೀದಿಯನ್ನೂ ಮೋಗಡೀವರ್ಗದ ನಕ್ಷೆಯನ್ನೂ ತೆಗೆದುಕೊಂಡು ಹೊರಟು ಹೋದನು. ಅದಾದ ಮೇಲೆಯೇ ಮಂಚವು ಸದ್ದಾಗಿ ನಾನು ಬೆಳಕಿಗೆ ಬಿದ್ದೆ.

ಬ್ಲೇಕ—ನನ್ನ ಕಥೆಯು ಇದಕ್ಕೂ ಚಿಕ್ಕದು. ಮನೆಗೆ ಬಂದವನೇ ನೀನು ಅದೃಶ್ಯನಾಗಿರುವೆಯೆಂದು ಕೇಳಿದೆ. ಕೂಡಲೆ ಸರ್ ಹೆನ್ರಿಯ ಬಳಿಗೆ ಹೋದೆ. ನೀನು ಕೌಂಟನನ್ನು ಹಿಂಬಾಲಿಸುತ್ತಿದ್ದೀಯೆಂದು ಗೊತ್ತಾಯಿತು. ಆ ಕ್ಷಣ ನಾನು ಟೈಗರನನ್ನು ಜೊತೆಗೆ ತೆಗೆದುಕೊಂಡು ಸಿಸಿಲಿ ಹೋಟೆಲ್ಲಿಗೆ ಹೋದೆ. ಟೈಗರವು ನಿನ್ನ ವಾಸನೆಯ ಆಧಾರದ ಮೇಲೆ ಮುಂದೆ ಮುಂದೆ ಹೋಯಿತು. ಅಲ್ಲಿಂದ ನಾನು ಮೋಟರನ್ನೇರಿ ಸ್ಕಾಟಲೆಂಡಿನ ಠಾಣೆಗೆ ಹೋದೆ. ಇನಸ್ಪೆಕ್ಟರ ವಿಜನರನ್ನು ಕರೆದುಕೊಂಡು ಟಾಯ್ಗರಿನ ಹಿಂದೆ ನಡೆದೆ. ಟಾಯ್ಗರವು ಮೂಸುತ್ತ ಇಲ್ಲಿಗೆ ಬಂದಿತು. ಆದುದರಿಂದ ವಾಸ್ತವವಾಗಿ ಈ ಸಾರೆ ನಿನ್ನ ಪ್ರಾಣವನ್ನುಳಿಸಿದವನು ಈ ಟಾಯಗರನೇ.

ಸಾರ್ಜ ಬೊಬ್ಬಿಟ್ಟ—ಮಹಾಶಯ, ನೀವು ನಮ್ಮನ್ನೇಕೆ ಕಟ್ಟಿ ಹಾಕಿರುವಿರಿ? ಕುಶಲವನ್ನಪೇಕ್ಷಿಸುವುದಾದರೆ ಈಗಲೆ ನಮ್ಮನ್ನು ಬಿಟ್ಟುಬಿಡಿರಿ.

ಅಲೆಕ್ಸಿಸ—ನಾವು ಬ್ರಿಟಿಶ ಕಾನೂನಿಗೆ ವಿರುದ್ಧವಾಗಿ ಏನನ್ನೂ ಮಾಡಿಲ್ಲ. ಹೀಗಿದ್ದು, ನೀವೇಕೆ ನಮ್ಮ ಮೇಲೆ ಅತ್ಯಾಚಾರ ನಡೆಸುತ್ತಿರುವಿರಿ?

ಬ್ಲೇಕ—ನಿಮ್ಮ ವಿರುದ್ಧವಾಗಿ ಕೈದಿನ ವಾರಂಟಿದೆ. ನೀವು ಜರ್ಮನಿಯಲ್ಲಿ ಘೋರ ದುಷ್ಕರ್ಮವನ್ನು ಮಾಡಿರುವಿರಿ. ಮೋಗಡೀವರ್ಗ ನಗರ

ದಲ್ಲಿ ನೀವು ಜೂಲಿಯಸನೆಂಬ ವ್ಯಕ್ತಿಯನ್ನು ಮೂರ್ಛೆಗೊಳಿಸಿ, ಅವನ ಜೇಬನ್ನು ಕತ್ತರಿಸಿರುವಿರಿ. ಇದು ಅಪರಾಧವಲ್ಲವೇನು? ಆದಾಗ್ಯೂ ನಿಮ್ಮನ್ನು ನಾವು ಲಂಡನಸ್ಥಿತ ಜರ್ಮನ ರಾಜದೂತನ ಕೈಗೊಪ್ಪಿಸಲೆಳಿಸು ವುದಿಲ್ಲ; ಆದರೆ ನೀವು ಬಿಡುಗಡೆ ಹೊಂದಲಿಚ್ಛಿಸುವುದಾದರೆ ನಾನು ಹೇಳಿ ದಂತೆ ಮಾಡಬೇಕು.

ಸಾರ್ಜಿ—ಏನು ಮಾಡಬೇಕು? ನಾವು ಯಾರಿಂದ ದುರ್ಗದ ನಕ್ಷೆ ಪಡೆದಿರುವೆವೋ, ಆ ಜರ್ಮನ್ನ ರಾಜಕರ್ಮಚಾರಿಯ ವಿಷಯದಲ್ಲಿ ನೀವೇ ನಾದರೂ ತಿಳಿಯಬಯಸುತ್ತೀರೇನು?

ಈ ಮಾತಿಗೇನೂ ಉತ್ತರವೀಯದೆ ಬ್ಲೇಕನು ಸ್ಮಿತ್ತನಿಗೆ:—ಸ್ಮಿತ್ತ, ಬೇಗ ಒಂದು ಕಾರನ್ನು ತಾ. ನಾನಿವರನ್ನು ವೋ ಸ್ಟ್ರೀಟಿನ ಠಾಣೆಗೊಯ್ಯುವೆ. ಇನಸ್ಪೆಕ್ಟರ ವಿಜನ, ದಯಮಾಡಿ ನೀವು ಈ ರಷಿಯನ್ ಬೇಹುಗಾರರ ಕೈದಿನ ಸಂಬಂಧದ ಯಾವ ವಿಷಯವೂ ಪತ್ರಿಕೆಯಲ್ಲಿ ಅಚ್ಚಾಗದಂತೆ ಏರ್ಪಾಡು ಮಾಡಿರಿ. ನಾವೀಗ ಠಾಣೆಯಿಂದಾಗಿ ಹೊಸ ಕಾರ್ಯಕ್ಷೇತ್ರಕ್ಕೆ ಹೋಗಬೇಕಾಗಿದೆ. ಈ ಸಲ ಕಠಿಣ ಪರೀಕ್ಷೆ.

ಆ ದಿನ ರಾತ್ರಿ ಸುಮಾರು ಹತ್ತೂವರೆ ಗಂಟೆಗೆ ಬ್ಲೇಕನು ಆ ಗುಪ್ತ ಚರರಿಬ್ಬರನ್ನೂ ವೋ ಸ್ಟ್ರೀಟಿನ ಜೈಲಿನಲ್ಲಿರಿಸಿ, ಸ್ಮಿತ್ತ ಮತ್ತು ಟೈಗರನೊಂ ದಿಗೆ ಬಂಡಿಯನ್ನೇರಿ ಬೇಕರ ಸ್ಟ್ರೀಟಿಗೆ ಹೊರಟನು. ರಾತ್ರಿ ಹನ್ನೆರಡೂವರೆ ಗಂಟೆಗೊಬ್ಬ ಜರ್ಮನ್ ಸಜ್ಜನನು ಆದೇ ಬಂಡಿಯಿಂದ ಸಿಸಿಲಿ ಹೋಟೆ ಲಿನ ಮುಂದಿಳಿದನು. ನೋಡಲಾತನು ಪ್ರತಿಷ್ಠಿತ ವ್ಯಕ್ತಿಯಾಗಿ ತೋರು ತ್ತಿದ್ದನು.

ಆಗಂತುಕನು ಹೋಟೆಲಿನ ಕೆಲಸಗಾರನನ್ನು ಕೇಳಿದ:—ಕೌಂಟ ಆರ್ಲಫರು ಹೋಟೆಲಿನಲ್ಲಿರುವರೆ? ಎಂದು.

ಅವನು 'ಹೂಂ' ಎಂದೆನ್ನಲು, ಆಗಂತುಕನು ಕಾರ್ಡೊಂದನ್ನಾತನ ಕೈಗೆ ಕೊಟ್ಟನು. ಅವನದನ್ನು ತೆಗೆದುಕೊಂಡು ಕೌಂಟನ ಬಳಿಗೆ ಹೋದನು. ಆಗಂತುಕನು ಕಾರ್ಡಿನಲ್ಲಿ ಸಾರ್ಜಿಯ ಹೆಸರು ಬರೆದು ಕೊಟ್ಟಿ ದ್ದನು.

ಆ ಸೇವಕನು ಹಿಂದಿರುಗಿ ಬಂದು ಆಗಂತುಕನನ್ನು ಕೌಂಟನ ಕೋಣೆಗೊಯ್ದನು. ಕೌಂಟನು ನೋಡಲು ಐರಾವತದಂತಿದ್ದನು. ಅವನ ಕಣ್ಣುಗಳು ನೀಲವಾಗಿದ್ದುವು. ಮೊಗದಲ್ಲಿ ಉದ್ದುದ್ದಾದ ಗಡ್ಡ-ಮೀಸೆಗಳಿದ್ದುವು.

ಕೌಂಟನು ಆಗಂತುಕನನ್ನು ನೋಡಿ ಬೆರಗಾಗಿ ನುಡಿದ:—ನೀವು ಯಾರನ್ನು ಹುಡುಕುತ್ತೀರಿ? ಈ ಕಾರ್ಡಾದರೋ ನಿಮ್ಮದಲ್ಲ.

ಆಗಂತುಕನ ಉಡುಪಿನಲ್ಲಿದ್ದವನು ಬ್ಲೇಕನೇ ಎಂದು ಓದುಗರು ಅರಿತಿರಬಹುದು.

ಬ್ಲೇಕನೆಂದ:—ನಾನು ನಿಮ್ಮ ಬಳಿಗೇ ಬಂದಿರುವೆನು.

ಕೌಂಟ—ಕಾರ್ಡು ಕಳುಹಿಸಿದವನ ಹೆಸರು ಸಾರ್ಜಯೆಂದಿದೆ. ಅವನು ನನಗೆ ಪರಿಚಿತನು; ಆದರೆ ನಿಮ್ಮ ಗುರುತೇನೂ ನನಗಿಲ್ಲ.

ಬ್ಲೇಕ—ಕಾರ್ಡಿನಲ್ಲಿ ನನ್ನ ಹೆಸರನ್ನು ನೋಡಿದರೆ ಸಂಭವತಃ ನೀವು ಭೆಟ್ಟಿಯಾಗಲೊಪ್ಪಲಾರಿರೆಂದೆಣಿಸಿ ನಾನು ಸಾರ್ಜಿಯ ಹೆಸರನ್ನು ಬರೆದಿದ್ದೆ.

ಕೌಂಟನು ಹುಬ್ಬನ್ನೇರಿಸಿ ಹೇಳಿದ:—ಧೂರ್ತತೆ ಗೈದು ನನ್ನನ್ನು ನೋಡಲು ಬಂದಿರುವೆಯಾ? ನೀನು ಯಾರು?

ಬ್ಲೇಕ—ನಾನು ಜರ್ಮನಿಯ ಗುಪ್ತಪೋಲೀಸ ವಿಭಾಗದ ಉದ್ಯೋಗಸ್ಥ. ನನ್ನ ಹೆಸರು ಹಾಸ್ಟಿಂಗ್ಸ.

ಕೌಂಟ—ನನ್ನ ಹತ್ತಿರವೇನು ಕೆಲಸವಿದೆ ನಿನಗೆ?

ಬ್ಲೇಕ—ಇಂದು ಸಾಯಂಕಾಲ ಗ್ರೋವ ಸ್ಟ್ರೀಟಿನ ಹೋಟೆಲಿನಲ್ಲಿ ಸಾರ್ಜ ಮತ್ತು ಅಲೆಕ್ಕಸರಿಂದ ನೀವು ಮೇಗಡೀವರ್ಗ ಕೋಟೆಯ ಅದಾವ ನಕ್ಷೆಯನ್ನು ಕೊಂಡಿರುವಿರೋ ಅದನ್ನೇ ತೆಗೆದುಕೊಳ್ಳಲು ನಾನು ಬಂದಿರುವೆನು. ನೀವು ಅವರಿಂದ ಬರೆಸಿಕೊಂಡ ಹಣದ ರಶೀದಿಯನ್ನೂ ನಾನು ಅಪೇಕ್ಷಿಸುತ್ತೇನೆ.

ಅದನ್ನು ಕೇಳಿದಾಕ್ಷಣ ಕೌಂಟನ ಮೊಗದ ಬಣ್ಣವು ಹಾರಿಹೋಯಿತು; ಆದರೆ ತನ್ನ ವಾಸ್ತವಿಕ ಭಾವವನ್ನು ಮರೆಯಿಸಿಕೊಂಡು

ಆತನು ಗಟ್ಟಿಯಾಗಿ ನಗತೊಡಗಿದನು. ಬ್ಲೇಕನು ತುಂಬಿದ ಪಿಸ್ತೂಲನ್ನು ತೆಗೆದುಕೊಂಡನು.

ಕೌಂಟನು ಹೇಳಿದನು:— ನೀವು ದರೋಡೆ ಮಾಡಬಂದಿರುವಿರೋ? ಕೂಡಲೆ ನನ್ನ ಕೋಣೆಯಿಂದ ಹೋಗಿರಿ. ಇಲ್ಲವಾದರೆ ನಾನೀಗಲೇ ನೌಕರರನ್ನು ಕರೆಯುವೆನು.

ಬ್ಲೇಕ— ಇಚ್ಛೆಇದ್ದರೆ ನೀನು ನೌಕರರನ್ನು ಕರೆಯಬಹುದು. ನಕ್ಷೆ ಮತ್ತು ರಶೀದಿಯನ್ನು ಒಳ್ಳೆಯ ಮಾತಿನಿಂದು ಕೊಡುವಿಯೋ ಅಥವಾ ಇಲ್ಲವೋ? ಎಂಬುದನ್ನು ತಿಳಿಸು.

ಕೌಂಟ— ಅದು ನನ್ನ ಹತ್ತಿರವಿಲ್ಲ; ರಷ್ಯಾಕ್ಕೆ ಕಳುಹಿಸಿದೆ.

ಬ್ಲೇಕ— ಸುಳ್ಳೇ ಹೇಳುವೆ. ನೀನದನ್ನು ಟಪ್ಪಾಲಿನಿಂದ ಕಳುಹಿಸುವ ಸಾಹಸ ಮಾಡಲಾರೆ. ಆ ಎರಡೂ ವಸ್ತುಗಳು ನಿನ್ನ ಹತ್ತಿರವೇ ಇವೆ.

ಕೌಂಟ— ಒಂದು ವೇಳೆ ನಾನು ಕೊಡದೇ ಹೋದರೆ?

ಬ್ಲೇಕ— ನೀನು ಕೊಟ್ಟೇ ಕೊಡುವೆ. ನಾನು ಹೀಗೆಯೇ ಬಿಡೆನು. ಬೇಗ ಕೊಡು; ಇಲ್ಲವಾದರೆ ಅಲ್ಲಗಳೆದುದರ ಫಲವನ್ನುಣ್ಣಲು ಸಿದ್ಧನಾಗು.

ಇಷ್ಟನ್ನು ಕೇಳುತ್ತಲೆ ಕೌಂಟನು ಹಸಿದ ಸಿಂಹನಂತೆ ಎದ್ದು ನಿಂತನು. ಅವನ ಭಾವವನ್ನು ನೋಡಿ ಬ್ಲೇಕನು ಮತ್ತೂ ಜಾಗರೂಕನಾಗಿ ಹೇಳಿದ:— ಎಚ್ಚರಿಕೆ! ಇನ್ನು ನಿನ್ನ ಮಸ್ತಕವನ್ನು ಭೇದಿಸಲು ಈ ಗುಂಡು ತಡ ಮಾಡದು.

ಕೌಂಟನು ಉಪಾಯಗಾಣದೆ, ಜೇಬಿನಿಂದ ಮುಚ್ಚಿದ ಲಕ್ಕೋಟೆಯನ್ನು ತೆಗೆದು ಕೊಟ್ಟನು. ಬ್ಲೇಕನು ಎಡಗೈಯಿಂದ ಲಕ್ಕೋಟೆಯನ್ನು ತೆರೆದು, ಅದರಲ್ಲಿ ನಕ್ಷೆ ಇದೆಯೋ ಇಲ್ಲವೋ ಎಂದು ನೋಡಿದನು. ಕೋಟೆಯ ನಕ್ಷೆ-ರಶೀದಿಗಳೆರಡೂ ಅದರಲ್ಲಿದ್ದುವು. ಅದನ್ನು ಕೂಡಲೆ ಅವನು ಜೇಬಿನೊಳಗಿಟ್ಟುಕೊಂಡು, ಪಿಸ್ತೂಲನ್ನು ಎದುರಿಗೆ ಹಿಡಿದಂತೆಯೇ ಬಾಗಿಲಿಗೆ ಬಂದನು. ಅನಂತರ ಕೆಳಗಿಳಿದು, ಬಂಡಿಯನ್ನೇರಿ ಮನೆಗೆ ಮರಳಿದನು.

ಮನೆಗೆ ಬಂದಾಗ ಸ್ಮಿತ್ತನ ಜೊತೆಗೆ ಪೋಲೀಸ ಇನಸ್ಪೆಕ್ಟರನೊಬ್ಬನ ಕುಳಿತದ್ದನು. ಅವನ ಹೆಸರು ಇನಸ್ಪೆಕ್ಟರ ರಿಚರ್ಡನೆಂದು.

ಸ್ಮಿತ್ತನೆಂದನು:—ನೀವು ಬಹು ಬೇಗನೆ ಬಂದಿರಿ; ಕೆಲಸವಾಯಿ ತೇನು?

ಬ್ಲೇಕ—ಹೂಂ.

ಸ್ಮಿತ್ತ—ಈಗೊಂದು ಹೊಸ ವಿಪತ್ತು ಒದಗಿದಂತಿದೆ.

ಬ್ಲೇಕ—ಅದೇನು? ಬೇಗ ಹೇಳು.

ಇನಸ್ಪೆಕ್ಟರ—ನನಗೆ ಕೇಳಿರಿ. ನಾನು ವಾರಂಟ ತೆಗೆದುಕೊಂಡು ನಿಮ್ಮನ್ನು ದಸ್ತಗಿರಿ ಮಾಡಲು ಬಂದಿರುವೆನು.

ಬ್ಲೇಕ—ಏತಕ್ಕಾಗಿ?

ಇನಸ್ಪೆಕ್ಟರ—ನೀವು ಗ್ಲೇಜದ ದುರ್ಗದಿಂದ ಪೋಲನೆಂಬ ಒಬ್ಬ ಅಪ ರಾಧಿಗೆ ಓಡಿಹೋಗಲು ಸಹಾಯ ಮಾಡಿರುವಿರಂತೆ.

ಬ್ಲೇಕ—ಪೋಲನ ಹೆಸರಿಗೂ ವಾರಂಟು ಹೊರಟಿದೆಯೋನು?

ಇನಸ್ಪೆಕ್ಟರ—ಇಲ್ಲ. ಸ್ವದೇಶದ ಸಾಮರಿಕ ವಿಧಿಯನ್ನುಲ್ಲಂಘಿಸಿ ಯಾವ ಅಪರಾಧವನ್ನು ಆ ಯುವಕನು ಮಾಡಿರುವನೋ, ಅದು ರಾಜ ನೈತಿಕ ಅಪರಾಧವು; ಆದುದರಿಂದ ಇನ್ನೊಂದು ದೇಶದ ರಾಜನೈತಿಕ ಅಪ ರಾಧಿಯನ್ನು ಇಲ್ಲಿ ಕೈದು ಮಾಡಲಾಗುವುದಿಲ್ಲ. ಪರದೇಶದ ರಾಜನೈತಿಕ ಅಪರಾಧಿಯನ್ನು ಇಂಗ್ಲಂಡದಲ್ಲಿ ಕೈದು ಮಾಡುವುದು ಇಲ್ಲಿಯ ಕಾನೂನಿಗೆ ವಿರುದ್ಧವಾದುದು.

ಬ್ಲೇಕ—ಅಭಿಯೋಗವನ್ನಾರೋಪಿಸಿದವನ ಹೆಸರೇನು?

ಇನಸ್ಪೆಕ್ಟರ:— ಜರ್ಮನ್ ಬೇಹುಗಾರ ವಿಭಾಗದ ಅಧ್ಯಕ್ಷರಾ ನೋವಲಫರು ನಿಮ್ಮ ಮೇಲೆ ವ್ಯವಹರಣೆ ನಡೆಯಿಸುವುದಕ್ಕಾಗಿ ಲಂಡನ್ನಿ ಬಂದಿರುವರು.

ಬ್ಲೇಕ—ಅಸಲು ಮನುಷ್ಯನ ಹೆಸರೂ ಗೊತ್ತಿದೆಯೇ?

ಇನಸ್ಪೆಕ್ಟರ—ಅವನ ಹೆಸರು ಲೆಫ್ಟನೆಂಟ ಓಟೋ ಹಿಲ್ಡರ್ಸ.

ಬ್ಲೇಕ—ಇದು ಒಳ್ಳೆಯದೇ ಸರಿ, ಎಂದು ತನ್ನೊಳಗೇ ಹೇ ಕೊಂಡು, ಆ ರಿಚರ್ಡನನ್ನುದ್ದೇಶಿಸಿ:—ನಡೆಯಿರಿ. ನಾನು ಹೊರ ಠಾಣೆಗೆ ಬರಬೇಕೆ?

ರಿಚರ್ಡ—ಹೌದು. ಸಂಭವತಃ ಅಲ್ಲಿ ನೀವು ಜಾಮೀನಿನ ಮೇಲೆ ಬಿಡಲ್ಪಡಬಹುದು.

ವೋ ಸ್ಟ್ರೀಟಿನ ಠಾಣೆಯನ್ನು ತಲುಪುತ್ತಲೆ ಬ್ಲೇಕನು ತಾನೇ ಜಾಮೀನದಾರನಾಗಿ, ಬೆಳಗ್ಗೆ ಹಾಜರಾಗುವೆನೆಂದು ವಚನವಿತ್ತು, ತನ್ನ ಮನೆಗೆ ಹೊರಟು ಬಂದನು. ಆಗ ರಾತ್ರಿ ಎರಡು ಹೊಡೆದಿದ್ದಿತು.

## ಹಗೆತನದ ಅಂತ

ಇಂಗ್ಲಂಡಿನ ವಿಶ್ವವಿಖ್ಯಾತ ಬೇಹುಗಾರನು ಜರ್ಮನ್ ಸರಕಾರದ ವಾರಂಟಿನ ಮೇಲೆ ಕೈದಿಯಾಗಿ ಕೋರ್ಟಿನಲ್ಲಿ ನಿಂತಿದ್ದಾನೆ. ಅವನ ಅಪರಾಧವು ಅಸಾಧಾರಣವಾದುದು. ಈ ಕೈದಿನ ವೃತ್ತಾಂತವನ್ನು ಪೋಲೀಸರು ಸಂಪೂರ್ಣ ಗೌಪ್ಯವಾಗಿಟ್ಟಿದ್ದರು. ವೋ ಸ್ಟ್ರೀಟಿನ ಪೋಲೀಸ ಕೋರ್ಟಿನಲ್ಲಿ ಇಂದು ಹನ್ನೆರಡು ಗಂಟೆಗೆ ರಾಬರ್ಟ ಬ್ಲೇಕನ ಮೊಕದ್ದಮೆಯು ವಿಚಾರಣೆಯಾಗಲಿಕ್ಕಿದ್ದಿತು. ಸುಮಾರು ಹತ್ತು ಗಂಟೆಯ ವೇಳೆ ಬ್ಲೇಕನು ಕೋರ್ಟಿನ ಹತ್ತಿರ ಒಂದು ಕೋಣೆಯಲ್ಲಿ ಅಲೆಕ್ಸಿಸ ಮತ್ತು ಸಾರ್ಜಿಯ ಹತ್ತಿರ ಮೆಲ್ಲಮೆಲ್ಲನೆ ಏನೋ ಮಾತಾಡುತ್ತಿದ್ದ. ಬ್ಲೇಕನು ಉಚ್ಚ ಶ್ರೇಣಿಯವನಾದರೂ ಸಾಮಾನ್ಯ ಜನರೊಂದಿಗೆ ಸೇರಿ ಅವರನ್ನು ವಶಮಾಡಿಕೊಳ್ಳಲು ಅತನರಿತಿದ್ದನು. ಜರ್ಮನಿಯ ಸಮ್ರಾಟರಿಂದ ಹಿಡಿದು ಇಂಗ್ಲಂಡಿನ ಹೊಲೆಯ ಅಥವಾ ಕೂಸಿನ ವರೆಗಿನವರು ಅವನ ಈ ಶಕ್ತಿಗೆ ಮುಗ್ಧರಾಗಬೇಕಾಗುತ್ತಿದ್ದಿತು. ಅಲೆಕ್ಸಿಸನೂ ಸಾರ್ಜಿಯೂ ಕೆಲವೇ ನಿಮಿಷಗಳಲ್ಲಿ ಅವನ ಗುಲಾಮರಾಗಬೇಕಾಯಿತು. ಇಬ್ಬರಿಗೂ ಹೇಳಿಕೊಟ್ಟು, ಬ್ಲೇಕನು ಹನ್ನೆರಡು ಗಂಟೆಗೆ ಮೊದಲೇ ಕೋರ್ಟಿನ ಕೋಣೆಯನ್ನು ಹೊಕ್ಕನು.

ಸಮೀಪದಲ್ಲಿಯೇ ಜರ್ಮನಿಯ ಸೈನಿಕ ಗುಪ್ತಪೋಲೀಸ ವಿಭಾಗದ ಅಧ್ಯಕ್ಷ ನೋವಲಫ ಮತ್ತು ಹಿಲ್ಡರ್ಸರೊಳಗೆ ಏನೇನೋ ಮಾತು-ಕತೆ

ನಡೆಯುತ್ತಲಿದ್ದಿತು. ಹಿಲ್ಡರ್ಶನ ಮೊಗದಲ್ಲಿ ಸಂತೋಷವು ತೊಳೆಯುತ್ತಿದ್ದಿತು. ಬ್ಲೇಕನೊಮ್ಮೆ ತಿರಸ್ಕಾರ ದೃಷ್ಟಿಯಿಂದ ಆತನ ಕಡೆಗೆ ನೋಡಿದನು.

ಮೊಕದ್ದಮೆಗೆ ಆರಂಭವಾಯಿತು. ಜರ್ಮನ್ ರಾಜದೂತನ ಬ್ಯಾರಿಸ್ಟರನು ಅಭಿಯೋಗವನ್ನು ಮುಂದಿಟ್ಟನು. ಆತನು ಸಾಕ್ಷಿದಾರರನ್ನು ಹಿಂದಿನಿಂದ ಕರೆಯಲಾಗುವುದೆಂದು ಹೇಳಿ, ಮೊದಲು ಅಭಿಯುಕ್ತನು ಯಾವ ಕೌಶಲ್ಯದಿಂದ ಜರ್ಮನಿಯ ಕಾನೂನನ್ನುಲ್ಲಂಘಿಸಿ ಈ ದುಷ್ಕೃತ್ಯವನ್ನು ಮಾಡಿರುವನೆಂಬುದನ್ನು ವಿವರಿಸಿದನು.

ಜರ್ಮನಿಯ ಬೇಹುಗಾರನೊಬ್ಬನು ಅಲ್ಲಿಯ ಹೇಂಬರ್ಗ ನಗರದಲ್ಲಿ ಅಭಿಯುಕ್ತನನ್ನು ನೋಡಿದ್ದನು. ಅವನೀತನನ್ನು ಗುರತಿಸಿದ್ದನು. ಅವನನ್ನು ಕಂಡ ಇವನು ಆತನಿಗೆ ರೂಪಾಯಿ ಕೊಡಲು ಹವಣಿಸಿದನು ಇದರಿಂದಾತನಿಗೆ ಬಲವಾದ ಸಂದೇಹವುಂಟಾಯಿತು. ಅಭಿಯುಕ್ತನು ಜರ್ಮನ್ ವ್ಯಾಪಾರಿಯ ವೇಷದಲ್ಲಿ ಗ್ಲೇಜ ನಗರದೊಳಗೆ ಕಾಲಿಟ್ಟನು. ಅಲ್ಲಿಯೊಂದು ಸಿಗರೇಟಿನಂಗಡಿಯ ಮೇಲ್ಗಡೆ ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡು ಎಮಿಲ ಟೊನರನೆಂಬ ಹೆಸರಿನಿಂದ ಉಳಿದುಕೊಂಡಿದ್ದನು. ಆ ಬೇಹುಗಾರನೊಂದು ದಿನ ಸಾಯಂಕಾಲ ಇವನನ್ನು ಹಿಂಬಾಲಿಸುತ್ತಿದ್ದಾಗ ಅಕಸ್ಮಾತ್ ಕುದುರೆಗಾಡಿ ಬಿದ್ದು ಮೂರ್ಛೆ ಹೋದನು. ಈತ ಪೋಲನನ್ನು ಹಾರಿಸಿಕೊಂಡು ಹೋದ ಮೂರನೆಯ ದಿನ ಆವನು ಎಚ್ಚತ್ತನು. ಅನಂತರ ಆತನು ಅಭಿಯುಕ್ತನಿಗೆ ಸಂಬಂಧಪಟ್ಟ ಎಲ್ಲ ಸಂಗತಿಯನ್ನೂ ಹೊರಗೆಡಹಿದನು.

ಇದಾದ ಬಳಿಕ ಮೊಕದ್ದಮೆಯು ಒಂದುವಾರ ಮುಂದುವರಿಸಲ್ಪಟ್ಟಿತು. ಬ್ಲೇಕನು ಜಾಮೀನಿನ ಮೇಲೆ ಬಿಡಲ್ಪಟ್ಟನು.

ಜಗುಲಿಯಲ್ಲಿ ಸೋವಲಫನಿಗೂ ಬ್ಲೇಕನಿಗೂ ಭೇಟಿಯಾಯಿತು. ಇಬ್ಬರೊಳಗೂ ಪೂರ್ವದ ಗೆಳೆತನವಿದ್ದಿತು. ಆಗ ಬ್ಲೇಕನು:—ನಾನು ಅಭಿಯುಕ್ತನಾಗಿ ನೀವು ವಾದಿಗಳಾದಾಗ್ಯೂ ನೀವು ನಮ್ಮ ಹಳೆಯ ಸ್ನೇಹವನ್ನು ಮರೆಯಲಾರಿರೆಂದೆಣಿಸುತ್ತೇನೆ. ಒಂದು ವಿಶೇಷ ಕಾರಣದಿಂದ ನಾನು ನಿಮ್ಮನ್ನು ನಿಲ್ಲಿಸಿದೆನು.

ಅಷ್ಟರಲ್ಲಿ ಹಿಂದಿನಿಂದ ಸ್ನಿತ್ರನು ಹಿಲ್ಡರ್ಸನ ಕೈಹಿಡಿದು ಗಟ್ಟಿಯಾಗಿ ಎಳೆದನು. ಬ್ಲೇಕನು ಜೇಬಿನಿಂದ ಕೃತ್ರಿಮ ಗಡ್ಡ-ಮೀಸೆಗಳನ್ನು ತೆಗೆದು ಹಿಲ್ಡರ್ಸನ ಮುಖಕ್ಕಿಟ್ಟನು. ಅದೇ ಸಮಯಕ್ಕೆ ಒಬ್ಬ ಸಿಪಾಯಿಯು ಜೊತೆಗೆ ಸಾರ್ಜೆ-ಅಲೆಕ್ಸಿಸರು ಮುಂದೆ ಬಂದರು. ಬ್ಲೇಕನು ಅವರಿಬ್ಬರನ್ನು ಕೇಳಿದನು:—ಇವನು ಅದೇ ಮನುಷ್ಯನೇ? ಬೇಗನೆ ಹೇಳಿರಿ.

ಸಾರ್ಜೆಯು ಹಿಲ್ಡರ್ಸನ ಮುಖವನ್ನು ದಿಟ್ಟಿಸಿ ನೋಡಿ ಹೇಳಿದನು:- ಹೌದು. ಇದೇ ಮನುಷ್ಯನಿಂದ ನಾವು ಮೇಗಡೀವರ್ಗದ ಕೋಟೆಯ ನಕ್ಷೆಯನ್ನು ಕೊಂಡುಕೊಂಡಿದ್ದೆವು.

ಅಲೆಕ್ಸಿಸನೂ ಈ ಮಾತನ್ನು ಪುಷ್ಟೀಕರಿಸಿದನು.

ಈ ಗಂಡಾಂತರವೊದಗುತ್ತಲೆ ಹಿಲ್ಡರ್ಸನ ಎದೆ ಧಸಕ್ಕೆಂದಿತು. ಒಂದೆರಡು ನಿಮಿಷ ತಡೆದು, ಅವನು ಓಡಲಿಚ್ಛಿಸುವಷ್ಟರಲ್ಲಿ ಬ್ಲೇಕನಾತನ ಭಾವವನ್ನರಿತು ಕಸುವಿನಿಂದವನನ್ನು ಹಿಡಿದುಕೊಂಡನು.

ಹಿಲ್ಡರ್ಸನು ಕ್ರುದ್ಧನಾಗಿ ಹೇಳಿದನು:—ನನಗೆ ಅಪಮಾನ ಮಾಡುತ್ತೀರಾ? ನಿಮಗಿಷ್ಟು ಸಾಹಸವೇ?

ನೋಡ ನೋಡುವಷ್ಟರಲ್ಲಿ ಹಲವಾರು ಜನರು ಬಂದು ನೆರೆದರು. ಪೋ ಸ್ಟ್ರೀಟಿನ ಠಾಣೆಯ ಅನೇಕ ಉದ್ಯೋಗಸ್ಥರೂ ಬಂದು ಮುತ್ತಿ ನಿಂತುಕೊಂಡರು; ಆದರೆ ಸಂಗತಿಯೇನೆಂದು ಯಾರೂ ಅರಿತಿರಲಿಲ್ಲ. ನೋವಲಫನೆಂದನು:—ಇದೆಂತಹ ಸಭ್ಯತೆ ನಿಮ್ಮದು?

ಬ್ಲೇಕ—ಇವನಿಗೆ ಉಪಯುಕ್ತವಾದ ವ್ಯವಹಾರವನ್ನೇ ಮಾಡುತ್ತಿದ್ದೇವೆ. ಇವನು ಇದಕ್ಕೇ ಪಾತ್ರನು. ಪೋಲನು ತೀರಾ ನಿರಪರಾಧಿಯೆಂದು ಹೇಳಿದರೆ ನೀವು ಸೋಜಿಗಗೊಳ್ಳಬಹುದು. ಹಿಲ್ಡರ್ಸನೇ ದುರ್ಗದ ನಕ್ಷೆ ತಯಾರಿಸಿ, ಈ ರಷ್ಯನ್ ಬೇಹುಗಾರರಿಗೆ ಮಾರಿದ್ದನು. ಇವನು ವಿಶ್ವಾಸಘಾತುಕ ಘೋರ ದೇಶದ್ರೋಹಿ.

ನೋವಲಫ—ನನಗೆ ನಂಬುಗೆಯಾಗುವುದಿಲ್ಲ.

ಬ್ಲೇಕ—ನಿಮಗೆ ನಂಬಿಗೆ ಮಾಡಿಕೊಡಲು ನನಗೆ ಕಷ್ಟವಾಗದು. ಇದಕ್ಕೆ ನನ್ನ ಹತ್ತಿರ ಬಲವಾದ ಪ್ರಮಾಣವಿದೆ. ಹಿಲ್ಡರ್ಸನು ಪೋಲನ

ಸೋದರತ್ತೆಯ ಮಗನು. ಪೋಲನ ಮೇಲೆ ಈತನು ತುಂಬಾ ಅಸೂಯೆ ಪಡುತ್ತಾನೆ. ಅವನನ್ನು ಸರ್ವನಾಶಗೊಳಿಸುವುದಕ್ಕಾಗಿ ಇವನು ಈ ಒಳ ಸಂಚು ನಡೆಯಿಸಿರುವನು. ಇವನು ಅಷ್ಟೇಕೆ ಆತನ ಮೇಲೆ ಹೊಟ್ಟೆಕಿಚ್ಚು ಪಡುತ್ತಾನೆಂದು ಇಲ್ಲಿ ತಿಳಿಸುವ ಅಗತ್ಯವಿಲ್ಲ. ಅಕಸ್ಮಾತ್ತಾಗಿ ಈ ರಷ್ಯನ್ ಬೇಹುಗಾರರಿಬ್ಬರೊಂದಿಗೆ ಹಿಲ್ಡರ್ಸನಿಗೆ ಭೇಟಿಯಾಯಿತು. ಹಿಲ್ಡರ್ಸನು ನಕಲಿ ಗಡ್ಡ-ಮೀಸೆಗಳನ್ನು ಹಾಕಿಕೊಂಡೇ ಇವರಿಬ್ಬರನ್ನು ಕಾಣುತ್ತಿದ್ದನು. ಒಂದು ಕೆಲಸವನ್ನು ಮಾಡಿಕೊಳ್ಳುವುದರಿಂದ ಹಿಲ್ಡರ್ಸನು ಮೇಗಡೀ ವರ್ಗದ ಕೋಟೆಯ ನಕ್ಷೆಯನ್ನು ಇವರಿಗೆ ಕೊಡುವುದೆಂದು ನಿಶ್ಚಯವಾಗಿದ್ದಿತು.

ಆ ಬಳಿಕ ಜೂಲಿಯಸನ ವೈಮರೆಯಿಸಿ ಒಳಸಂಚು ಹೂಡಿದುದೂ ಪೋಲನನ್ನು ಸಿಕ್ಕಿಹಾಕಿಸಿದುದೂ ಮುಂತಾದ ಎಲ್ಲ ಕತೆಯನ್ನು ವಿವರವಾಗಿ ಬ್ಲೇಕನು ಹೇಳಿದನು.

ಆಗ ಅಲೆಕ್ಸಿಸನು ಹಿಲ್ಡರ್ಸನನ್ನು ಸಂಬೋಧಿಸಿ:—ನೀವೇ ನಮ್ಮ ಹತ್ತಿರ ಮೇಗಡೀವರ್ಗದ ಕೋಟೆಯ ನಕ್ಷೆ ಮಾರಿದವರು. ಸ್ವಲ್ಪ ಹಣದಲ್ಲಿ ಅದನ್ನು ಪಡೆದ ಕಾರಣವೇ ನಾವೀಗ ವಿಪತ್ತಿನಲ್ಲಿ ಬೀಳಬೇಕಾಯಿತು. ಆಗಲೆ ನಮ್ಮ ಹತ್ತಿರ ನೀವೀ ವಿಷಯವನ್ನೆಲ್ಲ ಬಿಚ್ಚಿಹೇಳಲಿಲ್ಲವೇಕೆ?

ನೋವಲಘನಿಗೆ ಹಿಲ್ಡರ್ಸನೊಂದಿಗೆ ಮೈತ್ರಿಯಿದ್ದಿತು. ಆದುದರಿಂದ ಆತನಿಗಿನ್ನೂ ಬ್ಲೇಕನ ಮಾತಿನಲ್ಲಿ ವಿಶ್ವಾಸ ಹುಟ್ಟಲಿಲ್ಲ.

ಬ್ಲೇಕನೆಂದನು:—ಕೋಟೆಯ ಎರಡೂ ಖಂಡಗಳ ನಕ್ಷೆ ತಯಾರಿಸಲು ಪೋಲನಿಗೆ ಸಾಧ್ಯವೇ? ಇದು ಯೋಚಿಸತಕ್ಕ ವಿಷಯ; ಅಲ್ಲದೆ ಆವನು ಯಾವ ಉದ್ದೇಶದಿಂದ ಈ ನಕ್ಷೆಯನ್ನು ತಯಾರಿಸಿರುವನು?

ನೋವಲಘ—ನಿಮ್ಮ ಮಾತಿಗೆ ಉತ್ತರ ಕೊಡುವುದು ಕಷ್ಟ.

ಬ್ಲೇಕ— ಇಷ್ಟೇ ಅಲ್ಲ; ಈ ರಷ್ಯನ್ ಬೇಹುಗಾರರು ಈ ನಕ್ಷೆಯನ್ನು ಯಾವ ವಿದೇಶೀ ಸಜ್ಜನರಿಗೆ ಮಾರಿದ್ದರೋ, ಅವರಿಂದ ನಿನ್ನೆ ರಾತ್ರಿ ನಾನು ನಕ್ಷೆಯನ್ನೂ ಹಣದ ರಶೀದಿಯನ್ನೂ ತೆಗೆದುಕೊಂಡು ಬಂದಿರುವೆನು. ರಶೀದಿಯಲ್ಲಿಯೇ ನೀವಾ ಮನುಷ್ಯನ ಹೆಸರನ್ನೂ ನೋಡ

ಬಹುದು. ಲಕ್ಕೋಟೆಯನ್ನು ತೆಗೆದು ನೋಡಿ, ಅದನ್ನು ನಿಮ್ಮ ಹತ್ತಿರಿಟ್ಟು ಕೊಳ್ಳಿರಿ; ನಿಮ್ಮ ಮೇಲೆ ನನಗೆ ಸಂಪೂರ್ಣ ವಿಶ್ವಾಸವಿದೆ.

ಬ್ಲೇಕನು ಲಕ್ಕೋಟೆಯನ್ನು ನೋವಲಫನಿಗೆ ಕೊಟ್ಟನು. ಅವನ ದನ್ನು ತೆರೆದು ನೋಡಿದನು. ಅದರಲ್ಲಿ ಕೌಂಟನ ಹೆಸರನ್ನು ನೋಡಿ ನೋವಲಫನಿಗೆ ತುಂಬಾ ಸೋಜಿಗವೆನಿಸಿತು. ಹೇಳಿದ:—ಪೋಲನು ನಿರಪರಾಧಿಯೆಂದು ಈಗ ನನಗೆ ಗೊತ್ತಾಯಿತು. ಅನಂತರ ಹಿಲ್ಡರ್ಸನ ಕಡೆಗೆ ತಿರುಗಿ ನೋವಲಫನು:—ಹಿಲ್ಡರ್ಸ, ನೀನಿಷ್ಟು ಭಯಂಕರವಾದ ಕೆಲಸ ಮಾಡಿದೆಯಲ್ಲವೆ? ಇದು ತುಂಬಾ ನಾಚಿಕೆಗೇಡು!

ಹಿಲ್ಡರ್ಸನು ಈ ಮಾತಿಗೇನೂ ಉತ್ತರ ಕೊಡಲಿಲ್ಲ. ಅವನ ದೇಹವು ಥರಥರನೆ ನಡುಗಲಾರಂಭಿಸಿತು. ಆತನು ಅಲ್ಲಗಳೆಯಲಿಕ್ಕೂ ಯತ್ನಿಸಲಿಲ್ಲ.

ಬ್ಲೇಕ ನುಡಿದ:—ಈಗ ನಿಮಗೆ ನನ್ನ ವಿಶ್ವಾಸವಾಯಿತೆಂದು ತಿಳಿಯುತ್ತೇನೆ. ಇನ್ನು ನಿಮ್ಮ ಕರ್ತವ್ಯವಿದ್ದಂತೆ ಮಾಡಿರಿ. ಈ ವೇಳೆಯಲ್ಲಿ ಮೈತ್ರಿಯ ಬಂಧನದಲ್ಲಿ ಸಿಲುಕಿ, ಕರ್ತವ್ಯವನ್ನು ಪಾಲಿಸುವುದರಲ್ಲಿ ಉದಾಸೀನರಾಗಬಾರದು. ನಿಮ್ಮ ದೇಶದ ಸರಕಾರದ ಪ್ರತಿನಿಧಿಗಳಾಗಿ ನೀವಿಲ್ಲಿಗೆ ಬಂದಿರುವಿರಿ. ನಿಜವಾದ ಅಪರಾಧಿಯು ಯಾರೆಂಬುದು ನಿಮಗೆ ಗೊತ್ತಾಗಿರುವಾಗ, ಅವನನ್ನು ಬೇಗ ಕೈದು............

ಬ್ಲೇಕನ ಮಾತು ಕೊನೆಗೊಳ್ಳುವುದರ ಮುಂಚೆಯೇ ಹಿಲ್ಡರ್ಸನು ಎಲ್ಲರನ್ನೂ ನೂಕಿಕೊಂಡು, ವೇಗದಿಂದ ಕೆಳಗಿಳಿದು ಬಂದನು. ಅವನು ಓಡುವುದನ್ನು ಕಂಡು, ಬ್ಲೇಕನೂ ಸ್ಮಿತ್ತನೂ ನೋವಲಫನೂ ಇನ್ನೂ ಕೆಲ ಜನ ಪೋಲೀಸ ಉದ್ಯೋಗಸ್ಥರೂ ಅವನ ಹಿಂದೆ ಓಡಿದರು.

ಹಿಲ್ಡರ್ಸನು ಜೀವವುಳಿಸಿಕೊಳ್ಳಲೋಸುಗ ಹುಚ್ಚನಂತೆ ಓಡುತ್ತಿದ್ದನು. ಸ್ವಲ್ಪ ದೂರ ಹೋದ ಮೇಲೆ ಆತನಿಗೆ ದೂರದಲ್ಲಿಬ್ಬರು ಕಾನಸ್ಟೇಬಲ್ಲರು ಕಾಣಿಸಿದರು. ಅವರು ತನ್ನನ್ನು ಹಿಡಿಯಲು ಬಂದಿರುವರೆಂದೆಣಿಸಿ, ಆತನು ಅತ್ತ ಹೋಗದೆ, ಸ್ಟೇಶನ್ನಿನ ಕಡೆಗೋಡಿದನು. ಅಂತೂ ತೇಕುತ್ತ ಓಡುತ್ತ ಪ್ಲ್ಯಾಟಫಾರ್ಮಿನಲ್ಲಿ ಹೋಗಿ ನಿಂತನು.

ಬ್ಲೇಕ ಮುಂತಾದವರು ಸ್ಟೇಶನ್ನಿನ ಕಡೆಗೇ ಧಾವಿಸುತ್ತಿರುವುದನ್ನು ಅಲ್ಲಿ ಅವನು ಕಂಡನು. ಕೂಡಲೆ ರೈಲ ಕಂಬಿಯ ಮೇಲೆ ಹಾರಿಬಿಟ್ಟನು.

ಅಷ್ಟರಲ್ಲಿಯೇ ಒಂದು ಟ್ರೇನು ಬಂದುಬಿಟ್ಟಿತು. ಅಲ್ಲಿಯೇ ಆತನು ಸಮಾಪ್ತಿ ಹೊಂದಿದನು! ಇಷ್ಟು ದಿನಗಳ ಮೇಲೆ, ಒಂದು ಕ್ಷಣ ಹೊತ್ತಿನೊಳಗಾಗಿ ಆ ನಿರ್ಭಾಗ್ಯ ಪಾಪಿಯ ಇಹಲೀಲೆಯು ಕೊನೆಗಂಡಿತು!

ಭಗವಂತನ ರಾಜ್ಯದಲ್ಲಿ ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲೆಂದು ಅದಾರು ಹೇಳಬಲ್ಲರು?

## ಉಪಸಂಹಾರ

ಪೋಲನು ಉದಾಸೀನನಾಗಿ ಕುಳಿತಿರುವುದನ್ನು ಕಂಡು, ಮೆಡೆಲಿನಳು ಹೇಳಿದಳು:—ಪ್ರಿಯತಮಾ! ಇಷ್ಟೇಕೆ ನೀವು ಉದಾಸೀನರಾಗಿರುವಿರಿ? ನಿಮ್ಮ ಈ ಸ್ಥಿತಿಯನ್ನು ನೋಡಿ ನನ್ನ ಮನಸ್ಸು ಕಳವಳಗೊಳ್ಳುತ್ತಿದೆ. ಹೇಳಿ, ನಿಮ್ಮ ಚಿತ್ತವು ಪ್ರಸನ್ನವಾಗುವಂತೆ ನಾನೇನು ಮಾಡಬೇಕು?

ಪೋಲ—ಅದು ನಿನ್ನ ಶಕ್ತಿಗೆ ಮೀರಿದುದು. ನನ್ನ ಮನೋವೇದನೆಯು ಹಿಂಗುವಂತಹದಲ್ಲ.

ಮೆಡೆಲಿನ—ಏಕೆ? ಈಗಾದರೋ ನೀವು ನಿಮ್ಮ ಮನೆಗೆ ಬಂದಿರುವಿರಿ. ಇದಕ್ಕಿಂತ ಹೆಚ್ಚಿನದಿನ್ನೇನು ಬೇಕಾಗಿದೆ?

ಪೋಲ—ಹಾಯ್! ಮೆಡೆಲಿನಾ, ಇದನ್ನೂ ನಿನಗೆ ತಿಳಿಸಬೇಕಾಗುವುದೇ? ನನ್ನ ಹೆಸರು ಬಹು ಕಲಂಕಿತವಾಯಿತು; ನನ್ನನ್ನು ಜನರು ಸ್ವದೇಶದ್ರೋಹಿಯೆಂದೂ ವಿಶ್ವಾಸಘಾತುಕನೆಂದೂ ಕರೆಯುತ್ತಾರೆ. ಈ ಅಪಕೀರ್ತಿಯನ್ನು ಅಳಿಸಿಕೊಳ್ಳಲಾರದೆ ಹೋದರೆ, ನಾನು ಬದುಕಿದ್ದೇನು ಪ್ರಯೋಜನ?

ಇದನ್ನು ಕೇಳಿ ಮೆಡೆಲಿನಳು ಸುಮ್ಮನಾದಳು. ಆಕೆಯ ಕಣ್ಣಿಳಿಂದ ಅಶ್ರುಗಳುದುರತೊಡಗಿದುವು.

ಸ್ವಲ್ಪ ಸಮಯದ ಮೇಲೆ ಪೋಲನು ಹೇಳಿದನು:—ಮೆಡೆಲಿನಾ, ಒಂದು ವೇಳೆ ನಾನು ನಿನ್ನ ಪ್ರೇಮದಿಂದಲೂ ವಂಚಿತನಾಗಿರುತ್ತಿದ್ದರೆ, ಮತ್ತು ನಿನಗೂ ನನ್ನ ಮೇಲೆ ವಿಶ್ವಾಸವಿಲ್ಲದಿರುತ್ತಿದ್ದರೆ, ಇಷ್ಟರೊಳ

ಗೆಂದೋ ನಾನು ಆತ್ಮಹತ್ಯೆ ಮಾಡಿಕೊಂಡಾಗುತ್ತಿದ್ದಿತು; ಆದರೆ ಇಷ್ಟು ಕಲಂಕದ ಹೊರೆಯನ್ನು ಹೊತ್ತು ನಾನೀಗ ನಿನ್ನ ಪ್ರೇಮಕ್ಕೂ ಯೋಗ್ಯನಾಗಿ ಉಳಿಯಲಿಲ್ಲ. ನಿನ್ನನ್ನು ನೋಡಿ ಜನರು 'ಇಗೋ ನೋಡು; ವಿಶ್ವಾಸಘಾತುಕನ, ಸ್ವದೇಶದ್ರೋಹಿಯ ಪತ್ನಿ!' ಎಂದು ಹೇಳುವರು. ಅಯ್ಯೋ! ಇದರ ಸ್ಮರಣೆಯಾಗುತ್ತಲೆ, ನನ್ನಿಂದ ನನ್ನನ್ನು ತಡೆದಿಟ್ಟುಕೊಳ್ಳಲಾಗುವುದಿಲ್ಲ.

ಮೆಡೆಲಿನಳು ಎರಡೂ ಕೈಗಳಿಂದ ಸ್ವಾಮಿಯ ಕೊರಳನ್ನಪ್ಪಿಕೊಂಡು ಹೇಳಿದಳು:—ಅಧೀರರಾಗದಿರಿ. ಪ್ರಿಯತಮಾ, ಲೋಕದಲ್ಲಿ ಧರ್ಮವಿದೆ; ದೇವರಿರುವನು; ಅವನು ತುಂಬಾ ದಯಾಳುವು. ಭವಿಷ್ಯದಲ್ಲಿ ಜನರು ನಿಮ್ಮನ್ನು ನಿಶ್ಚಯವಾಗಿ ನಿಷ್ಕಲಂಕರೆಂದು ತಿಳಿದುಕೊಳ್ಳುವರು.

ಪೋಲ—ಭವಿಷ್ಯದ ಗರ್ಭದಲ್ಲೇನಿದೆಯೆಂಬುದನ್ನು ತಿಳಿದುಕೊಳ್ಳಲಾಗುತ್ತಿದ್ದರೆ, ಪ್ರಾಯಶಃ ನಾನೀ ಪ್ರಕಾರ ಚಿಂತಾಗ್ನಿಯಲ್ಲಿ ಸುಡಬೇಕಾಗುತ್ತಿರಲಿಲ್ಲ. ಯಾವ ಪಾಪದಿಂದಲೋ ನಾನು............

ಅಷ್ಟರಲ್ಲಿ ಬಾಗಿಲನ್ನು ತೆರೆದು ಬ್ಲೇಕನು ಒಳಬಂದು:—ಪೋಲ, ನನ್ನ ಪ್ರಯತ್ನವು ಇಷ್ಟು ದಿನಗಳ ಮೇಲೆ ಜಯಶೀಲವಾಯಿತು.

ಪೋಲನು ಆನಂದನಿಂದ ಜಿಗಿದೆದ್ದು ಹೇಳಿದನು:-ಯಾವ ಪ್ರಯತ್ನ? ಹೇಳಿರಿ ಬೇಗ.

ಬ್ಲೇಕ—ನಿನ್ನ ನಿರ್ದೋಷಿತೆಯನ್ನು ನಾನು ಪ್ರಮಾಣಿತಗೊಳಿಸಿರುವೆನು. ಇದರ ಅಕಾಟ್ಯ ಪ್ರಮಾಣವನ್ನು ಸಂಗ್ರಹಿಸಿಕೊಂಡೆನು. ಒಂದು ವಾರದೊಳಗೆ ಸಮ್ರಾಟರು ನಿನ್ನನ್ನು ಬಿಡುಗಡೆ ಮಾಡುವರು. ನೀನು ಹೇಗೆ ಒಳಸಂಚಿಗೊಳಗಾಗಿರುವೆಯೆಂಬುದು ಅವರಿಗೆ ಶೀಘ್ರದಲ್ಲಿಯೇ ವಿದಿತವಾಗುವುದು.

ಆ ಮೇಲೆ ಬ್ಲೇಕನು ಸಂಕ್ಷೇಪದಲ್ಲಿ ಯಾವತ್ತೂ ಸಂಗತಿಯನ್ನು ವಿಶದಪಡಿಸಿದನು. ಹಿಲ್ಡರ್ಸನ ಶೋಚನೀಯ ನಿಧನದ ಸುದ್ದಿಯನ್ನು ಕೇಳಿ ಪೋಲನು ವ್ಯಥೆಪಟ್ಟನು.

\+ \+ \+ \+ \+

ರಶ್ಯನ್ ಬೇಹುಗಾರರಿಬ್ಬರೂ ಭವಿಷ್ಯಕ್ಕೆ ಎಚ್ಚರಿಕೆಯನ್ನಿತ್ತು ಬಿಡುಗಡೆ ಮಾಡಲ್ಪಟ್ಟರು. ಒಂದು ವಾರದ ತರುವಾಯ ಜೂಲಿಯಸನೂ ಬಿಡಲ್ಪಟ್ಟನು. ಜರ್ಮನ್ ಸಮ್ರಾಟರು ಪೋಲನನ್ನು ನಿರ್ದೋಷಿಯೆಂದು ಬಿಟ್ಟುಬಿಟ್ಟರು. ಅವನ ಆಸ್ತಿಯೆಲ್ಲವೂ ಆತನಿಗೆ ಹಿಂದಿರುಗಿ ಕೊಡಲ್ಪಟ್ಟಿತು. ಸೈನಿಕ ಕಾರ್ಯದಿಂದಲೂ ಆತನಿಗೆ ಉದ್ಧಾರವಾಯಿತು.

ಕೆಲ ದಿನಗಳ ಮೇಲೆ ಜರ್ಮನ್ ಸಮ್ರಾಟರು ಬ್ಲೇಕನನ್ನು ಕರೆಯಿಸಿ, ಗ್ರೇಜ ನಗರದಿಂದ ಆತನು ಓಡಿ ಹೋದ ಯಾವತ್ತೂ ವೃತ್ತಾಂತವನ್ನು ಕೇಳಿದರು. ಆ ಅದ್ಭುತ ವಿವರಣೆಯನ್ನು ಕೇಳಿ ಸಮ್ರಾಟರು ತುಂಬಾ ಪ್ರಸನ್ನರಾಗಿ, ಬ್ಲೇಕನ ಬುದ್ಧಿಚಮತ್ಕಾರವನ್ನು ಹೆಚ್ಚಾಗಿ ಕೊಂಡಾಡಿದರು.

---

ಸಂಪೂರ್ಣ

# ಖಾಕಿ ಕೊಲೆಗಾರ

ರೋಮಾಂಚಕರ ಪತ್ತೆದಾರಿ ಪುಸ್ತಕ

೧೯೫೧ ನೇ ಅಕ್ಟೋಬರದಲ್ಲಿ ಪ್ರಕಟವಾಗುವದು.

ಬೇಕಾದವರು ಈಗಲೇ ನಿಮ್ಮ ಹೆಸರು ತಿಳಿಸಿರಿ.

ಬೆಲೆ ೧ ರೂ. ಅಂಚೆವೆಚ್ಚ ಬೇರೆ

ಬಿ. ಪಿ. ಕಾಳೆ, ಮದಿಹಾಳ-ಧಾರವಾಡ